KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಮಾರ್ಚ್ ೨೯, ೨೦೦೭ (ಚೈತ್ರ ೮, ಶಕ ವರ್ಷ ೧೯೨೯) | ಸಂಚಿಕೆ ೧೩ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** "ನಮ್ಮ ಭೂಮಿ-ನಮ್ಮ ತೋಟ" ಯೋಜನೆಯ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಮಸಂಖ್ಯೆ ಗ್ರಾಅಪ 5 ಸ್ವಉಕಾ 2005 ಬೆಂಗಳೂರು ದಿನಾಂಕ:01.04.2006.

2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 1 ಸ್ವಉಕಾ 2006 ಬೆಂಗಳೂರು ದಿನಾಂಕ:18.05.2006.

**ಪ್ರಸ್ತಾವನೆ:**

ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಸಮಸ್ತ ಭೂರಹಿತ ಕೃಷಿ ಕಾರ್ಮಿಕರ ಸಾಮಾಜಿಕ ಆರ್ಥಿಕ ವಿಕಾಸಕ್ಕೆ ಹಾಗೂ ಅವರ ಜೀವನ ಮಟ್ಟವನ್ನು ಸುಧಾರಿಸುವುದಕ್ಕಾಗಿ "ನಮ್ಮ ಭೂಮಿ-ನಮ್ಮತೋಟ" ಎಂಬ ಹೊಸ ಯೋಜನೆಯನ್ನು ಅನುಷ್ಠಾನಕ್ಕೆ ಜಾರಿಗೊಳಿಸಿದೆ. ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸಚಿವ ಸಂಪುಟವು ದಿನಾಂಕ:15.09.2005 ರಂದು ಅನುಮೋದನೆಯನ್ನು ನೀಡಿದೆ. ಸರ್ಕಾರದ ಆದೇಶ ಉಲ್ಲೇಖ (1)ರಲ್ಲಿ ಈ ಯೋಜನೆಯನ್ನು 2006-07ನೇ ಸಾಲಿಗೆ ರಾಜ್ಯ ಸರ್ಕಾರವು ಈ ಯೋಜನೆಗೆ ನಿಗದಿಪಡಿಸಬಹುದಾದ ಅನುದಾನದ ಹಂಚಿಕೆ ಮತ್ತು ವಿಧಿಸಬಹುದಾದ ನಿಬಂಧನೆಗೊಳಪಟ್ಟು ಮುಂದುವರಿಸಲಾಗಿದೆ. ಉಲ್ಲೇಖ (2)ರಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಆರ್ಥಿಕ ಮತ್ತು ಭೌತಿಕ ಗುರಿಗಳನ್ನು ನಿಗದಿಪಡಿಸಿ ಹಂಚಿಕೆ ಮಾಡಲಾಗಿದೆ. ಅದರಂತೆ ನಿಗದಿಪಡಿಸಲಾದ ಹಂಚಿಕೆಯ ಅನುದಾನದಲ್ಲಿ ಮೂರನೇ ಒಂದು ಭಾಗವನ್ನು ಮೊದಲನೆ ಕಂತಾಗಿ ರಾಜ್ಯದ 22 ಜಿಲ್ಲಾ ಪಂಚಾಯತಿಗಳಿಗೆ (ಬೆಂಗಳೂರುನಗರ, ಬೆಂಗಳೂರು ಗ್ರಾಮಾಂತರ, ಉಡುಪಿ, ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳು ಹೊರತುಪಡಿಸಿ) ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಈಗ ಈ ಯೋಜನೆಯಡಿ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಬೇಕಾಗಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 1 ಸ್ವಉಕಾ 2006, ಬೆಂಗಳೂರು, ದಿನಾಂಕ:23ನೇ ಫೆಬ್ರವರಿ 2007**

1. ಪ್ರಸ್ತಾವನೆಯಲ್ಲಿ ವಿವರಿಸಿದಂತೆ "ನಮ್ಮ ಭೂಮಿ- ನಮ್ಮ ತೋಟ" ಎಂಬ ಯೋಜನೆಯನ್ನು ರಾಜ್ಯದ ಜಿಲ್ಲಾ ಪಂಚಾಯತ್‌ಗಳ ಗ್ರಾಮೀಣ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಲು ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ (ಬೆಂಗಳೂರು ಗ್ರಾಮಾಂತರ ಬೆಂಗಳೂರು ನಗರ, ಉಡುಪಿ, ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳು ಹೊರತುಪಡಿಸಿ) ಲಗತ್ತಿಸಿದ ಅನುಬಂಧದಲ್ಲಿ ನಮೂದಿಸಿದಂತೆ ಒಟ್ಟು ರೂ.6,44,97,180-00ಗಳನ್ನು (ರೂ. ಆರು ಕೋಟಿ ನಲವತ್ತನಾಲ್ಕು ಲಕ್ಷದ ತೊಂಬತ್ತೇಳು ಸಾವಿರ ಒಂದುನೂರ ಎಂಬತ್ತು ಮಾತ್ರ) ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಸರ್ಕಾರವು ಹರ್ಷಿಸುತ್ತದೆ.

1. ಅತೀ ಹೆಚ್ಚು ಭೂರಹಿತ ಕೃಷಿ ಕಾರ್ಮಿಕರ ಕುಟುಂಬಗಳು ಇರುವಂತಹ ಗ್ರಾಮ ಪಂಚಾಯತ್‌ಗಳನ್ನು ಆದ್ಯತೆಯ ಮೇಲೆ ಆಯ್ಕೆ ಮಾಡುವುದು.
2. ನಿಗದಿಪಡಿಸಿದ ಭೌತಿಕ ಮತ್ತು ಆರ್ಥಿಕ ಗುರಿಯಂತೆ ಯಾವುದೇ ಕಾರಣಕ್ಕೂ ಮೀರದಂತೆ, ಸಾಧನೆ ಮಾಡುವುದು.
3. ಯೋಜನೆಯ ಅನುಷ್ಠಾನಕ್ಕೆ ಆಯ್ಕೆಯಾದ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಜಮೀನು ಖರೀದಿಗೆ ಸುಲಭವಾಗಿ ದೊರೆಯುವಂತಿರಬೇಕು.
4. ಫಲವತ್ತಾದ ಜಮೀನಿನ ಲಭ್ಯತಾನುಸಾರ ಖರೀದಿ ಮೊತ್ತ ಪ್ರತಿ ಫಲಾನುಭವಿಗೆ ರೂ.6000-00 ಗಳಿಗೆ ಮೀರದಂತೆ, ಕ್ರಮ ಜರುಗಿಸುವುದು.
5. ಸದರಿ ಆಯ್ದ ಗ್ರಾಮ ಪಂಚಾಯತ್‌ಗಳಲ್ಲಿ ಗ್ರಾಮ ಪಂಚಾಯತ್ ಯೋಜನೆಗೆ ಹೊರಡಿಸಲಾದ ಸರ್ಕಾರಿ ಸುತ್ತೋಲೆ ಮತ್ತು ಮಾರ್ಗ ಸೂಚಿಗಳ ಪ್ರಕಾರ ಅನುಷ್ಠಾನಕ್ಕೆ ಕ್ರಮಕೈಗೊಳ್ಳುವುದು.

6. ಫೆಬ್ರವರಿ 2007ರ ಅಂತ್ಯದೊಳಗೆ, ಪ್ರಾತಮಿಕ ಎಲ್ಲಾ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಿ, (ಫಲಾನುಭವಿಗಳ ಆಯ್ಕೆ ಮತ್ತು ಭೂಮಿ ಖರೀದಿ ಸೇರಿದಂತೆ) ಫಲಾನುಭವಿಗಳಿಗೆ ಭೂಮಿಯನ್ನು ನೀಡುವ ಪ್ರಕ್ರಿಯೆಗೆ ಚಾಲನೆ ನೀಡುವುದು.
7. ಪ್ರಸ್ತುತ ವರ್ಷದಲ್ಲಿ ಬಿಡುಗಡೆಯಾದ ಅನುದಾನವನ್ನು ಮಾರ್ಚ್ 2007 ರೊಳಗೆ ಸಂಪೂರ್ಣವಾಗಿ ಯೋಜನೆಗೆ ಬಳಸಿ ಸರ್ಕಾರಕ್ಕೆ ವರದಿ ಸಲ್ಲಿಸುವುದು.
8. ಮಾರ್ಗಸೂಚಿಯಲ್ಲಿ ತಿಳಿಸಿದ ರೀತ್ಯ ಮೂರು ಹಂತಗಳ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ವಿವಿಧ ಸಮಿತಿಗಳನ್ನು ಸಕಾಲದಲ್ಲಿ ರಚಿಸಿ, ಯೋಜನೆಯ ಅನುಷ್ಠಾನಕ್ಕೆ ಮಾರ್ಗದರ್ಶನ ನೀಡುವಂತೆ ಹಾಗೂ ಅನುಷ್ಠಾನಾಧಿಕಾರಿಗಳಿಗೆ ನೆರವಾಗುವಂತೆ ಮತ್ತು ತಾಂತ್ರಿಕ ಸಲಹೆಗಳನ್ನು ನೀಡುವಂತೆ, ಕಾರ್ಯನಿರ್ವಹಣೆಗೆ ಬರಲು ಕ್ರಮ ಜರುಗಿಸುವುದು.
9. ನಿಗದಿಪಡಿಸಿದ ಭೌತಿಕ ಗುರಿಗೆ ಅನುಗುಣವಾಗಿ ಆಯ್ದ ಗ್ರಾಮ ಪಂಚಾಯತ್‌ಗಳಲ್ಲಿ ಗ್ರಾಮಗಳು ಮತ್ತು ಫಲಾನುಭವಿಗಳ ಹೆಸರು ಮುಂತಾದ ವಿವರಗಳನ್ನು ಕೂಡಲೇ ಸರ್ಕಾರಕ್ಕೆ ಸಲ್ಲಿಸುವುದು.
10. ಇಂತಹ ಸೌಲಭ್ಯವನ್ನು ಇತರೆ ಯೋಜನೆಗಳನ್ನು ಪಡೆದಿದ್ದಲ್ಲಿ, ಅಂತಹ ಫಲಾನುಭವಿಗಳಿಗೆ ಈ ಯೋಜನೆಯ ಪ್ರಯೋಜನವನ್ನು ನೀಡಬಾರದು. ಯಾವುದೇ ಸಂದರ್ಭದಲ್ಲಿ ಎರಡು ಅಥವಾ ಹೆಚ್ಚು ಕಾರ್ಯಕ್ರಮಗಳಲ್ಲಿ ಪ್ರಯೋಜನಗಳನ್ನು ಪಡೆಯದಂತೆ ನೋಡಿಕೊಳ್ಳುವುದು.

2. ಬಿಡುಗಡೆಯಾದ ಅನುದಾನವನ್ನು ಗ್ರಾಮ ಪಂಚಾಯತ್‌ಗಳಿಗೆ ಹದಿನೈದು ದಿನಗಳೊಳಗಾಗಿ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಬಿಡುಗಡೆ ಮಾಡುವುದು.

3. ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು. 2515- ಇತರೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು-00-101 ಸಹಾಯ ಅನುದಾನ-0-23-ನಮ್ಮ ಹೊಲ ನಮ್ಮ ತೋಟ-059 ಇತರೆ ಖರ್ಚು (ಯೋಜನೆ) (2515-00-101-0-23-059)

ಬಿಡುಗಡೆಯಾದ ಅನುದಾನವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 7 ಜಿಡ್‌ಪಿಎ 2003 ದಿನಾಂಕ:14.07.2005 ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ-1 ಜಿಪಅ 07 ದಿನಾಂಕ19.01.2007 ರನ್ವಯ ಖಜಾನೆಯಿಂದ ಅನುದಾನ ಪಡೆದು ಯೋಜನೆಯ ರೂಪು ರೇಶಗಳ ಕಂಡಿಕೆ 6.7ರ ಅನ್ವಯ ವೆಚ್ಚದ ನಿರ್ವಹಣೆಯನ್ನು ಮಾಡುವುದು.

4. ಯೋಜನೆಯನ್ನು ಗ್ರಾಮ ಪಂಚಾಯತ್‌ಗಳ ಮೂಲಕವೇ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಾಂತರಾಜ್**

ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ANNEXURE
## "Namma Bhoomi Namma Thota" Scheme G.O. No. RDP/I/SEP/2006
## Bangalore, Dated:23-02-2007

(in Rs.)

| Sl. No. | District | No. of Agricultural labourers | Approxmimate No. of landless agricultural labourers out of Col.3 | Physical target No. of landless labourers to be covered during 2006-07 | Allocation of funds | Amount already released as Ist Installment vide G.O. No. RDP/I/SEP/2006 Dt:18.05.06 | Funds released now as IInd Installment |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | Bagalkot | 272817 | 21910 | 1402 | 8760000 | 2890800 | 2890800 |
| 2. | Belgaum | 587476 | 47170 | 3014 | 18870000 | 7192350 | 7192350 |
| 3. | Bellary | 361433 | 29018 | 1856 | 11609000 | 3830640 | 3830640 |
| 4. | Bidar | 209047 | 16784 | 1075 | 6714000 | 2215620 | 2215620 |
| 5. | Bijapur | 286739 | 23025 | 1472 | 9210000 | 3039300 | 3039300 |
| 6. | C.durga | 241444 | 19400 | 1250 | 6199000 | 2045340 | 2045340 |
| 7. | C. Magalur | 109037 | 8760 | 561 | 3503000 | 1156320 | 1156320 |
| 8. | C.R. Nagar | 192978 | 15500 | 992 | 7755000 | 2558820 | 2558820 |
| 9. | Davanagere | 270703 | 21700 | 1390 | 8694000 | 2869680 | 2869680 |
| 10. | Dharwad | 186543 | 14980 | 954 | 5991000 | 2472360 | 2472360 |
| 11. | Gadag | 179595 | 14425 | 922 | 5768000 | 2754180 | 2754180 |
| 12. | Gulbarga | 539561 | 43319 | 2771 | 17330000 | 5718900 | 5718900 |
| 13. | Hassan | 126659 | 10170 | 653 | 4068000 | 1342440 | 1342440 |
| 14. | Haveri | 291275 | 23390 | 1498 | 9355000 | 3417810 | 3417810 |
| 15. | Kolar | 337971 | 27140 | 1740 | 10855000 | 3582480 | 3582480 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 16. | Koppal | 234992 | 18861 | 1210 | 7548000 | 2490840 | 2490840 |
| 17. | Mandya | 206111 | 16550 | 1056 | 6620000 | 2184600 | 2184600 |
| 18. | Mysore | 250362 | 20100 | 1286 | 8041000 | 2653200 | 2653200 |
| 19. | Raichur | 328491 | 26369 | 1683 | 10551000 | 3482160 | 3482160 |
| 20. | Shimoga | 224124 | 18000 | 1152 | 7199000 | 2376000 | 2376000 |
| 21. | Tumkur | 313906 | 25225 | 1612 | 10082000 | 3327060 | 3327060 |
| 22. | U. Kannada | 84573 | 6784 | 435 | 2716000 | 896280 | 896280 |
| | **Total** | **5835837** | **468580** | **29984** | **187438000** | **64497180** | **64497180** |

ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್. 358

## ಕಂದಾಯ ಸಚಿವಾಲಯ

**ವಿಷಯ:** ಬೆಂಗಳೂರು ನಗರ ಜಿಲ್ಲೆ ವ್ಯಾಪ್ತಿಯಲ್ಲಿನ ಸರ್ಕಾರಿ ಜಮೀನುಗಳ ಅತಿಕ್ರಮಣ ಮತ್ತು ಒತ್ತುವರಿ ಪತ್ತೆಹಚ್ಚಲು ಎನ್‌ಫೋರ್ಸ್‌ಮೆಂಟ್ ಸೆಲ್‌ಗೆ (ಅನಧಿಕೃತ ಕಟ್ಟಡಗಳ ನಿರ್ಮಾಣ ತಡೆ ಕೋಶ) ತಾತ್ಕಾಲಿಕವಾಗಿ ಎರಡು ತಹಶೀಲ್ದಾರ್ ಹುದ್ದೆಗಳನ್ನು ಮತ್ತು ಎರಡು ಶಿರಸ್ತೇದಾರ್ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಪ್ರಸ್ತಾವನೆ:**

ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿನ ಸರ್ಕಾರಿ ಜಮೀನುಗಳ ಅತಿಕ್ರಮಣ ಮತ್ತು ಒತ್ತುವರಿ ಪತ್ತೆಹಚ್ಚುವ ಸಂಬಂಧವಾಗಿ ದಿನಾಂಕ:04.01.2007ರಂದು ಸನ್ಮಾನ್ಯ ಮುಖ್ಯಮಂತ್ರಿಗಳ ಘನ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ಭೂ ಕಬಳಿಕೆ ವಿರುದ್ಧ ಕ್ರಮ ಜರುಗಿಸಲು ವಿಶೇಷ ಜಾರಿ ಕೋಶವನ್ನು ರಚಿಸಿ ಅದರಲ್ಲಿ ಹೆಚ್ಚುವರಿಯಾಗಿ 2 ತಹಶೀಲ್ದಾರ್ ಹುದ್ದೆಗಳನ್ನು ಮತ್ತು 2 ಶಿರಸ್ತೇದಾರ್ ಹುದ್ದೆಗಳನ್ನು ಸೃಜಿಸಲು ತೀರ್ಮಾನಿಸಲಾಗಿರುತ್ತದೆ. ಸದರಿ ಸಭೆಯ ತೀರ್ಮಾನದಂತೆ ವಿಶೇಷ ಜಾರಿ ಕೋಶವನ್ನು ರಚಿಸಲಾಗಿದ್ದು, ಅದರಲ್ಲಿ ಹೆಚ್ಚುವರಿಯಾಗಿ ಎರಡು ತಹಶೀಲ್ದಾರ್ ಹುದ್ದೆಗಳನ್ನು ಮತ್ತು 2 ಶಿರಸ್ತೆದಾರ್ ಹುದ್ದೆಗಳನ್ನು ಸೃಜಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 12 ಎಟಿಎಸ್ 2007, ಬೆಂಗಳೂರು, ದಿನಾಂಕ:22ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಬೆಂಗಳೂರು ನಗರ ಜಿಲ್ಲೆ ವ್ಯಾಪ್ತಿಯಲ್ಲಿನ ಸರ್ಕಾರಿ ಜಮೀನುಗಳ ಅತಿಕ್ರಮಣ ಮತ್ತು ಒತ್ತುವರಿ ಪತ್ತೆಹಚ್ಚಿ ಭೂ ಕಬಳಿಕೆ ವಿರುದ್ಧ ಕ್ರಮ ಜರುಗಿಸಲು ಎನ್‌ಫೋರ್ಸ್‌ಮೆಂಟ್ ಸೆಲ್ (ಅನಧಿಕೃತ ಕಟ್ಟಡಗಳ ನಿರ್ಮಾಣ ತಡೆಕೋಶ), ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಇಲ್ಲಿಗೆ ಎರಡು ತಹಶೀಲ್ದಾರರ ಹುದ್ದೆಗಳನ್ನು ಹಾಗೂ ಎರಡು ಮ್ಯಾನೇಜರ್/ ಶಿರಸ್ತೇದಾರ್ ಹುದ್ದೆಗಳನ್ನು ತಾತ್ಕಾಲಿಕವಾಗಿ ಒಂದು ವರ್ಷದ ಮಟ್ಟಿಗೆ ದಿನಾಂಕ:02.02.2007 ರಿಂದ ಜಾರಿಗೆ ಬರುವಂತೆ ಸೃಜಿಸಿ ಆದೇಶಿಸಿದೆ.

ಮೇಲ್ಲೂಚಿತ ತಹಶೀಲ್ದಾರ್ ಮತ್ತು ಮ್ಯಾನೇಜರ್/ ಶಿರಸ್ತೇದಾರ್ ಹುದ್ದೆಗಳಿಗೆ ಸಂಬಂಧಪಟ್ಟ ವೇತನ ಮತ್ತಿತರ ಭತ್ಯೆಗಳಿಗೆ ತಗಲುವ ವೆಚ್ಚವನ್ನು "2053-00-800-0-04-059 ಇತರೇ ವೆಚ್ಚ" ಈ ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 23 ವೆಚ್ಚ 8/ 07, ದಿನಾಂಕ:02.02.2007ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಶ್ರೀಮತಿ ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 359

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕ ರವರ ವಿರುದ್ಧದ ಶಿಸ್ತುಕ್ರಮಗಳ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 45 ತೋಸೇಪ 2004 ದಿನಾಂಕ:20.08.2004.

2. ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂಖ್ಯೆ: ತೋಇ/ ಆ/ ಸಿ/ ವಿನಿ 10-2/ 81/ 2003-04, ದಿನಾಂಕ:26.12.2005. (ವಿಚಾರಣಾಧಿಕಾರಿಯವರ ವರದಿಯೊಂದಿಗೆ)
3. 2ನೇ ಕಾರಣ ಕೇಳುವ ನೋಟೀಸ್‌ನ ಪತ್ರ ಸಂಖ್ಯೆ: ಕೃತೋಇ 45 ತೋಸೇಪ 2004, ದಿನಾಂಕ:25.01.2006.
4. 2ನೇ ಕಾರಣ ಕೇಳುವ ನೋಟೀಸ್‌ಗೆ ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕ ಇವರು ತೋಟಗಾರಿಕೆ ನಿರ್ದೇಶಕರವರಿಗೆ ನೀಡಿರುವ ಅಹವಾಲು.
5. ತೋಟಗಾರಿಕೆ ನಿರ್ದೇಶಕರು ಸರ್ಕಾರಕ್ಕೆ ಬರೆದಿರುವ ಪತ್ರದ ಸಂಖ್ಯೆ: ತೋಇ/ ಆ/ಸಿ/ ವಿನಿ10-2/ 81/ 2003-04, ದಿನಾಂಕ:08.03.2006.

**ಪ್ರಸ್ತಾವನೆ:**

ಶ್ರೀ ಮಹಮ್ಮದ್ ಜಕಾವುಲ್ಲಾ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ನಿವೃತ್ತ), ಹಾಗೂ ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕ, ಸಿಂಧನೂರು ಇವರುಗಳು ಈ ಹಿಂದೆ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ), ಮಾನ್ವಿ ಹಾಗೂ ತೋಟಗಾರಿಕೆ ಸಹಾಯಕ, ತೋಟಗಾರಿಕೆ ನಿರ್ದೇಶಕರ ಕಾರ್ಯಾಲಯ (ರಾವ), ಮಾನ್ವಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ 1999-2000, 2002-03 ಮತ್ತು

2003-04ನೇ ಸಾಲಿನಲ್ಲಿ ಎಸ್-28 ಯೋಜನೆಯಡಿಯಲ್ಲಿ ಹಣದ ದುರುಪಯೋಗ ಮಾಡಿರುವುದು. ಸಸ್ಯಸಂರಕ್ಷಣಾ ಔಷಧಿ ಖರೀದಿಯಲ್ಲಿ ಅವ್ಯವಹಾರ, ಮಾನ್ವಿ ತೋಟಗಾರಿಕೆ ಕ್ಷೇತ್ರದ ತೆಂಗು, ಸಪೋಟಾ, ಮಾವು ಮತ್ತು ಸೀಬೆ ಫಸಲಿನ ಹರಾಜಿನ 3:4 ಭಾಗದ ಮೊತ್ತವನ್ನು ಪಡೆದು ಹಾಗೂ ಇಲಾಖಾ ವತಿಯಿಂದ ಮಾರಾಟ ಮಾಡಿದ ಮೊತ್ತವನ್ನು ಪಡೆದು ಸರ್ಕಾರಕ್ಕೆ ಜಮಾ ಮಾಡದೇ ಹಣ ದುರುಪಯೋಗಪಡಿಸಿಕೊಂಡು ಸರ್ಕಾರಕ್ಕೆ ನಷ್ಟ ಉಂಟು ಮಡಲು ಕಾರಣವಾಗಿರುವುದರಿಂದ ಇವರೀರ್ವರ ಮೇಲೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11ನೇ ನಿಯಮದ 2ನೇ ಉಪ ನಿಯಮ ಮತ್ತು 3ನೇ ಉಪ ನಿಯಮ (ಸಿ) ಖಂಡದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ಪ್ರಕರಣದ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯವರನ್ನು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ನೇಮಕಾತಿ ಮಾಡಿದೆ.

ಮೇಲೆ ಓದಲಾದ (2)ರ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ಪ್ರಕರಣದ ವಿಚಾರಣೆಯನ್ನು ನಿವೃತ್ತ ಜಿಲ್ಲಾ ನ್ಯಾಯಾಧೀಶರು ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಶ್ರೀ ಮಹಮ್ಮದ್ ಜಕಾವುಲ್ಲಾ, ನಿವೃತ್ತ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಸಕರು ಇವರ ವಿರುದ್ಧ ಮಾಡಲಾದ ಆರೋಪ 1, 2, 3 ಸಾಬೀತಾಗಿರುವುದಿಲ್ಲವೆಂದು ವರದಿ ಮಾಡಿದ್ದಾರೆ.

ಶ್ರೀ ಸೈಯದ್ ಮೊಹಬೂಬ್, ತೋಟಗಾರಿಕೆ ಸಹಾಯಕ ಇವರ ವಿರುದ್ಧ ಮಾಡಲಾದ ಆರೋಪ 4ರಲ್ಲಿ ಇವರು ಹಿರಿಯ ಸಹಾಯ ತೋಟಗಾರಿಕೆ ನಿರ್ದೇಶಕರು, ಸಿಂಧನೂರು ಇವರ ಅಧೀನ ಈ ಹಿಂದೆ ಪ್ರಭಾರೆ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ), ಮಾನ್ವಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ 2003-04ನೇ ಸಾಲಿನಲ್ಲಿ ಮಾನ್ವಿ ತೋಟಗಾರಿಕೆ ಕ್ಷೇತ್ರದ ತೆಂಗು, ಸಪೋಟಾ, ಮಾವು ಮತ್ತು ಸೀಬೆ ಫಸಲಿನ 3:4 ಭಾಗದ ಮೊತ್ತವನ್ನು ಪಡೆದು ಹಾಗೂ ಇಲಾಖಾ ವತಿಯಿಂದ ಮಾರಾಟ ಮಾಡಿದ ಮೊತ್ತವನ್ನು ಪಡೆದು ಸರ್ಕಾರಕ್ಕೆ ಜಮಾ ಮಾಡದೇ ರೂ.9,700-00 ನ್ನು ದುರುಪಯೋಗಪಡಿಸಿಕೊಂಡು ಸರ್ಕಾರಕ್ಕೆ ನಷ್ಟವನ್ನು ಉಂಟು ಮಾಡಲು ಕಾರಣರಾಗಿರುವುದರಿಂದಲೂ ಹಾಗೂ ಆರೋಪ 5ರಲ್ಲಿ ಮಾನ್ವಿ ತೋಟಗಾರಿಕೆ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕ್ರ.ಸಂ. 76835 ರಿಂದ 76845 ರವರೆಗೆ ಒಟ್ಟು 11 ನಗದು ರಸೀದಿಗಳ ಮುಖಾಂತರ ಪಡೆದ ಗಿಡಗಳ ಮಾರಾಟ ಮೊತ್ತವನ್ನು ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾವ), ಮಾನ್ವಿ ಕಛೇರಿಯಲ್ಲಿ ಜಮಾ ಮಾಡದೆ ಸ್ವಂತಕ್ಕೆ ಉಪಯೋಗಿಸಿಕೊಂಡು ಸರ್ಕಾರಕ್ಕೆ ರೂ.8,250-00ಗಳ ನಷ್ಟವನ್ನು ಉಂಟು ಮಾಡಲು ಕಾರಣರಾದ ಪ್ರಯುಕ್ತ ಮತ್ತು ಆರೋಪ 6ರಲ್ಲಿ ಇದೇ ಅವಧಿಯಲ್ಲಿ ಮಾನ್ವಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ 2002-03ನೇ ಸಾಲಿನಲ್ಲಿ ಉದ್ರಿ ಬಿಲ್ಲಿನ ಮೂಲಕ ಹಣ್ಣಿನ ಕಸಿ ಗಿಡಗಳನ್ನು ಸರಬರಾಜು ಮಾಡಿದ ಬಾಬ್ತಿಗೆ ಸಂಬಂಧವಾಗಿ ಕಛೇರಿಯಲ್ಲಿ ತಲುಪಿರುವ ಚೆಕ್ಕು ಹಾಗೂ ಹುಂಡಿಗಳಿಗೆ ಸಾಮಾನ್ಯ ರಸೀದಿಗಳನ್ನು ಹಾಕಿ ಒಟ್ಟು ರೂ.66,966-00 ಗಳನ್ನು ಸರ್ಕಾರಕ್ಕೆ ಜಮಾ ಮಾಡದೇ ದುರುಪಯೋಗಪಡಿಸಿಕೊಂಡು ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವುದರಿಂದಲೂ ಹಾಗೂ ಆರೋಪ 7 ರಲ್ಲಿ ಮಾನ್ವಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ 1998-99 ರಿಂದ 2003-04 ನೇ ಸಾಲಿನಲ್ಲಿ ಸ್ಟಾಕ್‌ನಲ್ಲಿರುವ ಈ ಕೆಳಕಂಡ ವಿವಿಧ ಹಣ್ಣಿನ ಕಸಿ ಗಿಡಗಳನ್ನು ವರ್ಗಾವಣೆಯಾಗಿ ದಿನಾಂಕ: 31.07.2003 ರಂದು ಬಿಡುಗಡೆ ಹೊಂದಿ ತೋಟಗಾರಿಕೆ ಸಹಾಯಕ ಇವರಿಗೆ ಒಟ್ಟು ರೂ.3,49,309-00 ಗಳ ಮೊತ್ತದ ಗಿಡಗಳನ್ನು ಕಡಿಮೆ ಹಸ್ತಾಂತರಿಸಿರುವುದರಿಂದ ಸದರಿ ಹಣಕ್ಕೆ ನಷ್ಟ ಉಂಟು ಮಾಡಲು ಕಾರಣರಾಗಿರುತ್ತಾರೆ.

| | |
|---|---|
| 1) ಮಾವು ಕಸಿ ಗಿಡಗಳು: ಮೊತ್ತ | ರೂ.1,78,529-00 |
| 2) ದಾಳಿಂಬೆ ಗೂಟೆಗಳು | ರೂ.20,400-00 |
| 3) ಪೇರಲಕಸಿ ಗಿಡಗಳು | ರೂ.30,000-00 |
| 4) ಸಪೋಟಾ ಕಸಿ ಗಿಡಗಳು | ರೂ.1,20,380-00 |
| | **ರೂ.3,49,309-00** |

ಆದ್ದರಿಂದ ಇವರ ವಿರುದ್ಧ ಮಾಡಲಾದ ಆರೋಪ 4 ಭಾಗಶಃ ಸಾಬೀತಾಗಿದೆ. ಉಳಿದ ಆರೋಪಗಳಾದ 5, 6 ಮತ್ತು 7 ಸಂಪೂರ್ಣವಾಗಿ ಸಾಬೀತಾಗಿರುತ್ತದೆ. ಸದರಿ ಆರೋಪಗಳಲ್ಲಿ ಒಳಗೊಂಡ ಒಟ್ಟು ರುಜುವಾತಾದ ಮೊತ್ತ ರೂ. 4,34,495-00 ಗಳಾಗಿರುತ್ತವೆ ಎಂದು ವಿಚಾರಣಾ ವರದಿಯನ್ನು ತಿಳಿಸಿರುತ್ತಾರೆ.

ಮೇಲೆ ಓದಲಾದ (3)ರ ಸರ್ಕಾರಿ ಪತ್ರದಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ವಯ ಸಾಬೀತಾದ ಆರೋಪಗಳ ಬಗ್ಗೆ ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕ ಇವರಿಗೆ ಕಾರಣ ಕೇಳುವ 2ನೇ ನೋಟೀಸನ್ನು ಜಾರಿ ಮಾಡುವಂತೆ ತಿಳಿಸಲಾಗಿದೆ.

ಮೇಲೆ ಓದಲಾದ (4)ರ ಅಹವಾಲಿನಲ್ಲಿ ಆರೋಪಗಳನ್ನು ನಿರಾಕರಿಸಿ ನ್ಯಾಯ ದೊರಕಿಸಿಕೊಡುವಂತೆ ಕೋರಿದ್ದಾರೆ. ಮೇಲೆ ಓದಲಾದ (5)ರ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ಆರೋಪಿತ ನೌಕರರು ಸಲ್ಲಿಸಿರುವ ಅಂತಿಮ ಅಹವಾಲನ್ನು ಪರಿಶೀಲಿಸಲಾಗಿ ಇವರ ವಿರುದ್ಧದ ಆರೋಪಗಳನ್ನು ಅಲ್ಲಗಳೆಯಲು ಯಾವುದೇ ಹೊಸ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯ ಆಧಾರದ ಅಂತಿಮ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಪರಿಶೀಲಿಸಿ, ಈ ಪ್ರಕರಣದಲ್ಲಿ ಶ್ರೀ ಮಹಮ್ಮದ್ ಜಕಾವುಲ್ಲಾ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ನಿವೃತ್ತ) ಇವರ ಮೇಲಿನ ಆರೋಪಗಳು ಸಾಬೀತಾಗಿರುವುದಿಲ್ಲ ಎಂಬ ಅಂಶವನ್ನು ಸರ್ಕಾರ ಪರಿಗಣಿಸಿದೆ. ಆದುದರಿಂದ ಇವರನ್ನು ಆರೋಪಮುಕ್ತಗೊಳಿಸಲು ತೀರ್ಮಾನಿಸಿದೆ.

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಪರಿಶೀಲಿಸಿ, ಶ್ರೀ ಸೈಯದ್ ಮೆಹಬೂಬ್ ಇವರ ಮೇಲಿನ ಆರೋಪಗಳು ಸಾಬೀತಾಗಿರುವುದನ್ನು ಸರ್ಕಾರವು ಪರಿಗಣಿಸಿ, ಈ ಕೆಳಕಮಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 45 ತೋಸೇಪ 2004, ಬೆಂಗಳೂರು, ದಿನಾಂಕ:20ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ ಶ್ರೀ ಮಹಮ್ಮದ್ ಜಕಾವುಲ್ಲಾ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ನಿವೃತ್) ಇವರ ಮೇಲಿನ ಆರೋಪಗಳು ಸಾಬೀತಾಗಿರುವುದಿಲ್ಲವಾದ್ದರಿಂದ ಇವರನ್ನು ಆರೋಪಮುಕ್ತಗೊಳಿಸಿದೆ.

ಶ್ರೀ ಸೈಯದ್ ಮೆಹಬೂಬ್, ತೋಟಗಾರಿಕೆ ಸಹಾಯಕ ಇವರು ತಮ್ಮ ಕರ್ತವ್ಯದಲ್ಲಿ ಲೋಪವೆಸಗಿ ಸರ್ಕಾರಕ್ಕೆ ಒಟ್ಟು ರೂ.4,34,495-00 (ನಾಲ್ಕು ಲಕ್ಷದ ಮೂವತ್ತನಾಲ್ಕು ಸಾವಿರದ ನಾಲ್ಕುನೂರು ತೊಂಭತ್ತೈದು ರೂಗಳು ಮಾತ್ರ) ನಷ್ಟವಾಗಲು ಕಾರಣವಾಗಿದ್ದಾರೆಂದು ವಿಚಾರಣೆಯಲ್ಲಿ ರುಜುವಾತಾಗಿರುತ್ತದೆ. ಸದರಿಯವರಿಂದ ಮೇಲಿನ ಮೊತ್ತವನ್ನು ವಸೂಲಿಯೊಂದಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (vi) ರಡಿಯಲ್ಲಿ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 360

ಸರ್ಕಾರದ ಅಧೀನ ಕಾರ್ಯದರ್ಶಿ (ತೋಟಗಾರಿಕೆ),
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ತಿದ್ದುಪಡಿ ಆದೇಶ

## ಸಂಖ್ಯೆ: ಕೃತೋಇ 10 ತೋಯೋಕಾ 2007, ಬೆಂಗಳೂರು, ದಿನಾಂಕ:19ನೇ ಫೆಬ್ರವರಿ, 2007

ದಿನಾಂಕ: 14.02.2007ರಲ್ಲಿ ಹೊರಡಿಸಲಾದ ಇದೇ ಸಮಸಂಖ್ಯೆಯ ತಿದ್ದುಪಡಿ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ. ಮುಂದುವರೆದು ದಿನಾಂಕ:05.09.2006ರಂದು ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ ಕೃತೋಇ 97 ತೋಯೋಕಾ 2006ರಲ್ಲಿನ ಅಂಶಗಳನ್ನು ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಆದೇಶದ ಪ್ಯಾರಾ | ತಿದ್ದುಪಡಿ | ಅನುದಾನ (ರೂ.ಕೋಟಿಗಳಲ್ಲಿ) |
|---|---|---|
| 2(4) | ಲಾಲ್‌ಬಾಗ್‌ನಲ್ಲಿ ಮಾದರಿ ಕೋಯ್ಲೋತ್ತರ ನಿರ್ವಹಣೆ ವಿಭಾಗದ ನಿರ್ಮಾಣ/ ಸ್ಥಾಪನೆ. | 0.50 |
| 2(5) | ಕೋಯ್ಲೋತ್ತರ ನಿರ್ವಹಣೆ ಚಟುವಟಿಕೆಗಳ ಬಗ್ಗೆ ತರಬೇತಿ, ಪ್ರಚಾರ ಮತ್ತು ಜಾಹಿರಾತು. | 0.55 |
| 2(7) | ರಾಜ್ಯದಲ್ಲಿನ ಕೃಷಿ ವಿಶ್ವವಿದ್ಯಾನಿಲಯ ಮತ್ತು ಇತರೆ ಕೃಷಿ/ ತೋಟಗಾರಿಕೆ ಸಂಶೋಧನಾ ಸಂಸ್ಥೆಗಳಿಗೆ ನೆರವು. | 0.56 |
| 2(8) | ತೋಟಗಾರಿಕೆ ಉತ್ಪನ್ನಗಳ ಮೌಲ್ಯವರ್ಧನೆ ಹಾಗೂ ಸಂಸ್ಕರಣೆಗಳಿಗೆ ಸಂಬಂಧಿಸಿದಂತೆ ಕಾಯ್ದಿರಿಸಲಾಗಿದೆ. | 0.10 |

ಈ ಕಾರ್ಯಕ್ರಮಗಳನ್ನು ಕೆಳಕಾಣಿಸಿದ ಮಾರ್ಗಸೂಚಿಗಳನ್ವಯ ಜಾರಿಗೊಳಿಸತಕ್ಕದ್ದು.

1. ಪ್ರಾಜೆಕ್ಟ್‌ಗಳಿಗೆ ನಿಯಮಾನುಸಾರ ಸಕ್ಷಮ ಪ್ರಾಧಿಕಾರದಿಂದ ಒಪ್ಪಿಗೆ ಪಡೆಯತಕ್ಕದ್ದು.
2. ಈ ಯೋಜನೆಯ ಅನುಷ್ಠಾನದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ನಿಯಮ, ಮಾಹಿತಿ ಹಕ್ಕುನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
3. ಈ ಯೋಜನೆಯಡಿ ರೈತರು, ರೈತ ಗುಂಪುಗಳು, ಸರ್ಕಾರಿ ಸಂಸ್ಥೆಗಳು, ಅರೆ ಸರ್ಕಾರಿ ಸಂಸ್ಥೆಗಳು, ಉದ್ಯಮಿಗಳು, ಸ್ವಸಹಾಯ ಗುಂಪುಗಳು, ಸಂಘಗಳು, ಸಹಕಾರ ಸಂಸ್ಥೆಗಳು ನೆರವು ಪಡೆಯಲು ಅರ್ಹರಾಗಿರುತ್ತಾರೆ.
4. ಯೋಜನೆಯನ್ನು ಸುಗಮವಾಗಿ ಅನುಷ್ಠಾನಗೊಳಿಸಲು ತೋಟಗಾರಿಕೆ ನಿರ್ದೇಶಕರು ನಿಯಮಾನುಸಾರ ಹೆಚ್ಚಿನ ಅನುಷ್ಠಾನ ಮಾರ್ಗಸೂಚಿಯನ್ನು (Operational Guidelines) ನೀಡುವರು.
5. ಯೋಜನೆಯ ಪ್ರಗತಿ ವರದಿಗಳನ್ನು ತೋಟಗಾರಿಕೆ ನಿರ್ದೇಶಕರು ನಿಯಮಿತವಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಉಳಿದಂತೆ ಮೇಲೆ ಓದಲಾದ ಆದೇಶದಲ್ಲಿನ ಮಾರ್ಗಸೂಚಿಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ. ಈ ಆದೇಶವು ತಕ್ಷಣದಿಂದ ಜಾರಿಗೆ ಬಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 361

ಸರ್ಕಾರದ ಅಧೀನ ಕಾರ್ಯದರ್ಶಿ (ತೋಟಗಾರಿಕೆ),

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ವಿಷಯ:** ಎಣ್ಣೆ ತಾಳೆ ಯೋಜನೆಯಡಿ ತಾಳೆ ಹಣ್ಣುಗಳ ಬೆಲೆ ನಿಗದಿಪಡಿಸುವ ಸಮಿತಿಯ ಪುನರ್ ರಚನೆ ಕುರಿತು.

**ಓದಲಾಗಿದೆ:** 1. ಆದೇಶ ಸಂಖ್ಯೆ: ಕೃತೋಇ 88 ತೋಯೋಕಾ 2002 ದಿನಾಂಕ:17.10.2002.

2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಅನಿ/ ತಾಬೆ/ ಸತೋಅ1/ 16/ 05-06/ 1117 ದಿನಾಂಕ:08.09.2006.

ಭಾರತ ಸರ್ಕಾರದ ಟೆಕ್ನಾಲಜಿ ಮಿಷನ್ ಆನ್ ಆಯಿಲ್ ಸೀಡ್ಸ್, ಪಲ್ಸನ್ ಅಂಡ್ ಮೇಜ್ ಯೋಜನೆಯಡಿ ಎಣ್ಣೆ ತಾಳೆ ಅಭಿವೃದ್ಧಿ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ತಾಳೆಬೆಳೆಯ ಪ್ರದೇಶ ವಿಸ್ತರಣೆ ಮತ್ತು ಸಂಸ್ಕರಣ ಘಟಕಗಳನ್ನು ಸ್ಥಾಪಿಸಲು ಖಾಸಗಿ ಸಂಸ್ಥೆಗಳಿಗೆ ವಹಿಸಲಾಗಿದೆ. ತಾಳೆ ಹಣ್ಣುಗಳನ್ನು ಕಟಾವು ಮಾಡಿದ 24 ಗಂಟೆಗಳೊಳಗಾಗಿ ಸಂಸ್ಕರಿಸಬೇಕಾಗಿದ್ದು, ಖಾಸಗಿ ಕಂಪನಿಗಳು ತಾಳೆ ಹಣ್ಣುಗಳನ್ನು ರೈತರಿಂದ ನೇರವಾಗಿ ಖರೀದಿಸುತ್ತಿವೆ. ರೈತರ ಹಿತದೃಷ್ಟಿಯಿಂದ ತಾಳೆ ಹಣ್ಣುಗಳ ಖರೀದಿ ಬೆಲೆಯನ್ನು ನಿಗದಿಪಡಿಸಲು ದಿನಾಂಕ:17.07.1993ರಂದು ತಾಳೆ ಹಣ್ಣುಗಳ ಬೆಲೆ ನಿಗದಿ ಸಮಿತಿಯನ್ನು ರಚಿಸಲಾಗಿದ್ದು ಈ ಸಮಿತಿಯ ಪುನರ್ ರಚನೆಯನ್ನು ಆಗಿಂದಾಗ್ಗೆ ಮಾಡಲಾಗುತ್ತಿದೆ.

ಮೇಲೆ ಓದಲಾದ (1)ರ ಆದೇಶದನ್ವಯ ಕಾರ್ಯದರ್ಶಿಗಳು (ತೋಟಗಾರಿಕೆ), ಕೃಷಿ ಮತ್ತು ತೋಟಗಾರಿಕೆ ಇಲಾಖೆರವರ ಅಧ್ಯಕ್ಷತೆಯಲ್ಲಿ 7 ಜನ ಅಧಿಕಾರಿ ಸದಸ್ಯರು, 10 ಜನ ರೈತ ಸದಸ್ಯರುಗಳು ಹಾಗೂ 3 ಕಂಪನಿ ಪ್ರತಿನಿಧಿಗಳನ್ನು ಒಳಗೊಂಡಂತೆ ತಾಳೆ ಹಣ್ಣುಗಳ ಬೆಲೆ ನಿಗದಿಪಡಿಸುವ ಸಮಿತಿಯನ್ನು ರಚಿಸಲಾಗಿತ್ತು. ಈ ಸಮಿತಿಯಲ್ಲಿನ ರೈತ ಸದಸ್ಯರುಗಳ ಅವಧಿಯು ಮುಕ್ತಾಯಗೊಂಡಿದ್ದರಿಂದ ಪುನರ್ ರಚಿಸುವ ಪ್ರಸ್ತಾವನೆಯನ್ನು ಸಕಾರದ ಮುಂದಿಡಲಾಗಿದೆ.

ಸರ್ಕಾರವು ಈ ವಿಷಯವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

## ಸರ್ಕಾರದ ಆದೇಶ ಸಂಖ್ಯೆ: ಕೃತೋಇ 306 ತೋಯೋಕಾ 2005, ಬೆಂಗಳೂರು, ದಿನಾಂಕ:19ನೇ ಫೆಬ್ರವರಿ, 2007

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ ತಾಳೆ ಹಣ್ಣುಗಳ ಖರೀದಿ ಬೆಲೆಯನ್ನು ನಿಗದಿಪಡಿಸಲು ದಿನಾಂಕ:17.10.2002ರ ಸರ್ಕಾರಿ ಆದೇಶದಲ್ಲಿ ಪುನರ್ ರಚಿಸಲಾಗಿದ್ದ ಸಮಿತಿಯನ್ನು ರದ್ದುಗೊಳಿಸಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

**1. ಅಧಿಕಾರಿ ಸದಸ್ಯರುಗಳು:**

ಅ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು - ಅಧ್ಯಕ್ಷರು
ಕೃಷಿ ಮತ್ತು ತೋಟಗಾರಿಕೆ ಇಲಾಖೆ,
(ತೋಟಗಾರಿಕೆ) ಬಹುಮಹಡಿ ಕಟ್ಟಡ, ಬೆಂಗಳೂರು.

ಆ) ನಿರ್ದೇಶಕರು,
ತೋಟಗಾರಿಕೆ ಇಲಾಖೆ, ಲಾಲ್‌ಬಾಗ್, ಬೆಂಗಳೂರು. - ಸದಸ್ಯರು

ಇ) ನಿರ್ದೇಶಕರು
ರಾಷ್ಟ್ರೀಯ ತಾಳೆ ಸಂಶೋಧನಾ ಕೇಂದ್ರ, ಪೆಡವಗಿ, ಆಂಧ್ರಪ್ರದೇಶ. - ಸದಸ್ಯರು

ಈ) ಸಂಶೋಧನಾ ನಿರ್ದೇಶಕರು,
ಕೃಷಿ ವಿಶ್ವವಿದ್ಯಾಲಯ, ಜಿ.ಕೆ.ವಿ.ಕೆ., ಬೆಂಗಳೂರು. - ಸದಸ್ಯರು

ಉ) ಅಪರ ನಿರ್ದೇಶಕರು,
ತೋಟಗಾರಿಕೆ ಇಲಾಖೆ, (ತಾಳೆ ಬೆಳೆ), - ಸದಸ್ಯ ಕಾರ್ಯದರ್ಶಿ.
ಲಾಲ್‌ಬಾಗ್, ಬೆಂಗಳೂರು.

**2. ರೈತ ಸದಸ್ಯರು:**

**ಮೈಸೂರು ವಲಯ:**

ಅ) ಶ್ರೀ ಎಂ.ಎ. ಮಾದಪ್ಪ, ವೀರಾಜಪೇಟೆ ತಾಲ್ಲೂಕ್, ಕೊಡಗು ಜಿಲ್ಲೆ.

ಆ) ಶ್ರೀ ಎನ್.ಟಿ. ತಿಮ್ಮಯ್ಯ, ನಿಳುವಾಗಿಲು, ಅರಕಲಗೂಡು, ಹಾಸನ ಜಿಲ್ಲೆ.

**ಬಳ್ಳಾರಿ ವಲಯ:**

ಅ) ಶ್ರೀ ಬಿ.ವಿ. ವಿಶ್ವಂಬರ್, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ.

ಆ) ಶ್ರೀ ಕೆ. ಗಣೇಶಪ್ಪ, ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ.

**ಕೊಪ್ಪಳ ವಲಯ:**

ಅ) ಶ್ರೀ ಹೇಮಂತ್ ವಿ. ಪಾಟೀಲ್, ಮುಂಡರಗಿ ತಾಲ್ಲೂಕು, ಗದಗ ಜಿಲ್ಲೆ.

ಅ) ಶ್ರೀ ಶೇಖರಗೌಡ, ಸಿಂಧನೂರು, ರಾಯಚೂರು ಜಿಲ್ಲೆ.

**ಬೆಳಗಾವಿ ವಲಯ:**

ಅ) ಶ್ರೀ ಬಂದು ಎಸ್. ಮಾಲೆ, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ.

ಆ) ಶ್ರೀ ವೆಂಕಟೇಶ್ ಕೆ. ಹುದ್ದರ್, ಹುಕ್ಕೇರಿ ತಾಲ್ಲೂಕ್, ಬೆಳಗಾವಿ ಜಿಲ್ಲೆ.

**ಶಿವಮೊಗ್ಗ ವಲಯ:**

ಅ) ಶ್ರೀ ಈರಪ್ಪ ನಾಯಕ, ಹೊರಬಯಲು, ಸೊರಬ ತಾಲ್ಲೂಕು.

ಆ) ಶ್ರೀ ಕೆ.ವಿ. ಪಾಪಣ್ಣ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

**3. ಕಂಪನಿ ಪ್ರತಿನಿಧಿಗಳು:**

ಅ) ಎಕ್ಸಿಕ್ಯೂಟಿವ್ ಡೈರೆಕ್ಟರ್
ಮೆ: ಪಮ್‌ಟೆಕ್ ಇಂಡಿಯ ಲಿ.,
ನಂ.5-1-61, 1ನೇ ಮಹಡಿ, ಸೂರ್ಯರಾವ್ ಪೇಟೆ ಮುಖ್ಯ ರಸ್ತೆ, ಕಾಕಿನಾಡ-533 001, ಆಂಧ್ರಪ್ರದೇಶ್.

ಆ) ವೈಸ್ ಪ್ರೆಸಿಡೆಂಟ್,
ಮೆ: ಭದ್ರಾವತಿ ಬಾಲಾಜಿ ಆಯಿಲ್ ಪಾಮ್ಸ್ ಲಿ.,
ನಂ.8, ಬಿ.ಹೆಚ್. ರಸ್ತೆ, ಕಾರೇಹಳ್ಳಿ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.

ಇ) ವೈಸ್ ಪ್ರೆಸಿಡೆಂಟ್,
ಮೆ: ಫುಡ್ಸ್ ಫ್ಯಾಟ್ಸ್ ಅಂಡ್ ಫರ್ಟಿಲೈಸರ್ಸ್ ಲಿ.,
3-5-874/7 ಮತ್ತು 8, 2ನೇ ಮಹಡಿ, ಹೈದರಗುಡ, ಹೈದರಬಾದ್-500029, ಆಂಧ್ರಪ್ರದೇಶ್.

ಉ) ಜನರಲ್ ಮ್ಯಾನೇಜರ್,
ಮೆ: ಸಿಂಹಪುರಿ ಅಗ್ರಿಟೆಕ್ ಲಿ., 4ನೇ ಮುಖ್ಯ ರಸ್ತೆ, ಬಸವೇಶ್ವರ ನಗರ,
3ನೇ ಸ್ಟೇಜ್, 1ನೇ ಬ್ಲಾಕ್, ಬೆಂಗಳೂರು.

ಊ) ಜನರಲ್ ಮ್ಯಾನೇಜರ್,
ಮೆ: ಗೊದ್ರೇಜ್ ಅಗ್ರೋವೆಟ್, ಫಿರೋಜ್‌ಷಾನಗರ, ಈಸ್ಟನ್ ಎಕ್ಸ್‌ಪ್ರೆಸ್ ಹೈವೇ, ವಿಕ್ರೋಲಿ (ಈಸ್ಟ್) ಮುಂಬಯಿ-400 079.

ಸದರಿ ಸಮಿತಿಯು ಕಾಲಕಾಲಕ್ಕೆ ಸಭೆ ಸೇರಿ ಕೂಲಂಕುಷವಾಗಿ ಚರ್ಚಿಸಿ ತಾಳೆ ಹಣ್ಣುಗಳ ಖರೀದಿ ಬೆಲೆ ನಿಗದಿಪಡಿಸಿ ಸೂಕ್ತ ಆದೇಶ ನೀಡುವುದು. ಈ ಸಮಿತಿಯಲ್ಲಿರುವ ರೈತ ಸದಸ್ಯರ ಅವಧಿಯನ್ನು ಈ ಆದೇಶದ ದಿನಾಂಕದಿಂದ ಮೂರು ವರ್ಷಗಳವರೆಗೆ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 362

ಸರ್ಕಾರದ ಅಧೀನ ಕಾರ್ಯದರ್ಶಿ (ತೋಟಗಾರಿಕೆ),
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆ: ಪ್ರಸನ್ನ ಪವರ್ ಲಿಮಿಟೆಡ್ ಕಂಪನಿಯವರಿಗೆ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಅಣಿಯೂರು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಡಿಇ 42 ಎನ್‌ಸಿಇ 1998, ದಿನಾಂಕ:11.11.1998.

2. ಸರ್ಕಾರಿ ಆದೇಶ ಸಂಖ್ಯೆ: ಇಂಇ 105 ಎನ್‌ಸಿಇ 2002 ದಿನಾಂಕ: 28.05.2002.

3. ಸರ್ಕಾರಿ ಆದೇಶ ಸಂಖ್ಯೆ: ಇಂಇ 266 ಎನ್‌ಸಿಇ 2003 ದಿನಾಂಕ:12.12.2004.

4. ಸರ್ಕಾರಿ ಆದೇಶ ಸಂಖ್ಯೆ: ಇಂಇ 143 ಎನ್‌ಸಿಇ 2005, ದಿನಾಂಕ:13.06.2005.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ 06/ ಅಣಿಯೂರು/ 2004/ 2401, ದಿನಾಂಕ:25.11.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ಪ್ರಸನ್ನ ಪವರ್ ಲಿಮಿಟೆಡ್ ಕಂಪನಿಯವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಅಣಿಯೂರು ಗ್ರಾಮದ ಅಣಿಯೂರು ಹೊಳೆಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಅಣಿಯೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಯೋಜನೆಯ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ನಿಂದ 4.5 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಓದಲಾದ (3)ರ ಆದೇಶದಲ್ಲಿ ಯೋಜನೆಯ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್‌ನಿಂದ 6.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಕಾಲಾವಕಾಶವನ್ನು 28.05.2005 ರವರೆಗೆ ವಿಸ್ತರಿಸಲಾಗಿದೆ.

ಓದಲಾದ (3)ರ ಆದೇಶದಲ್ಲಿ ಯೋಜನೆಯ ಕಾಲಾವಕಾಶವನ್ನು 29.05.2005 ರಿಂದ ಮುಂದಿನ 2 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ. ಸದರಿ ಅವಧಿಯು ದಿನಾಂಕ:28.05.2007ಕ್ಕೆ ಮುಗಿಯಲಿದೆ.

ಓದಲಾದ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ಪ್ರಸನ್ನ ಪವರ್ ಲಿಮಿಟೆಡ್ ಕಂಪನಿಗೆ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮುಂದಿನ 18 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 469 ಎನ್‌ಸಿಇ 2006, ಬೆಂಗಳೂರು, ದಿನಾಂಕ:27ನೇ ಫೆಬ್ರವರಿ, 2007**

ಸರ್ಕಾರವು ಮೆ: ಪ್ರಸನ್ನ ಪವರ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಅಣಿಯೂರು ಗ್ರಾಮದ ಅಣಿಯೂರು ಹೊಳೆಗೆ ಅಡ್ಡಲಾಗಿ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಅಣಿಯೂರು ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ:29.05.2007 ರಿಂದ ಮುಂದಿನ 18 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ ಹಾಗೂ ಇನ್ನು ಮುಂದೆ ಈ ಯೋಜನೆಗೆ ಕಾಲಾವಕಾಶವನ್ನು ನೀಡಲಾಗುವುದಿಲ್ಲ ಎಂಬ ಷರತ್ತಿಗೊಳಪಟ್ಟಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಸ್ ಬಿ. ಕೃಷ್ಣಪ್ಪನವರ್**

ಪಿ.ಆರ್. 363

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಕೃಷಿ ಅಧಿಕಾರಿ (ಕೃಷಿ ಪಾಠಶಾಲೆ), ಹಳ್ಳಿಕೆರೆ ಇವರ ಕಛೇರಿಯಲ್ಲಿ ನಡೆದ ಹಣದ ಅವ್ಯವಹಾರದ ಬಗ್ಗೆ ದಂಡನೆ ಆದೇಶ.

**ಓದಲಾಗಿದೆ:** 1. ಷೋಕಾಸ್ ನೋಟೀಸು ಸಂಖ್ಯೆ: ಇಎಸ್‌ಟಿ 1 ಐಎನ್‌ಕ್ಯೂ (1): 2003-04 ದಿನಾಂಕ:27.06.2003.
2. ಶ್ರೀ ಎನ್. ಕೃಷ್ಣಮೂರ್ತಿ, ಕೃಷಿ ಅಧಿಕಾರಿ ಇವರ ಸ್ವೀಕೃತಿ ಪತ್ರ ದಿನಾಂಕ:30.06.2003.
3. ಶ್ರೀ ಹೆಚ್.ಎ. ಮಿಶೇರ, ಪ್ರಥಮ ದರ್ಜೆ ಸಹಾಯಕ ಇವರ ರಕ್ಷಣಾತ್ಮಕ ಹೇಳಿಕೆ ದಿನಾಂಕ:18.07.2003.
4. ಕೃತೋಇ 75 ಕೃಪವಿ 2003 ದಿನಾಂಕ:29.11.2003 ವಿಚಾರಣಾಧಿಕಾರಿಗಳ ನೇಮಕ.
5. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ:04.01.2005.
6. 2ನೇ ಕಾರಣ ಕೇಳುವ ನೋಟೀಸು ದಿನಾಂಕ:01.06.2005.
7. ಶ್ರೀ ಮಿಶೇರ, ಪ್ರಥಮ ದರ್ಜೆ ಸಹಾಯಕ ಇವರ ಲಿಖಿತ ಹೇಳಿಕೆ ದಿನಾಂಕ:08.09.2005.

**ಪ್ರಸ್ತಾವನೆ:**

ಶ್ರೀ ಎನ್. ಕೃಷ್ಣಮೂರ್ತಿ, ಕೃಷಿ ಅಧಿಕಾರಿ ಹಾಗೂ ಶ್ರೀ ಹೆಚ್.ಎ. ಮಿಶೇರ, ಪ್ರಥಮ ದರ್ಜೆ ಸಹಾಯಕ ಇವರು ಕೃಷಿ ಪಾಠಶಾಲೆ ಹಳ್ಳಿಕೆರೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಡಿ.ಕೆ. ಕೃಷ್ಣಮೂರ್ತಿ, ಕೃಷಿ ಸಹಾಯಕ ಹಾಗೂ ಶ್ರೀ ಸಿಂಪೀರಯ್ಯ, ಗ್ರೂಪ್ ಡಿ ನೌಕರ ಇವರ ಸಾಮಾನ್ಯ ಭವಿಷ್ಯ ನಿಧಿ ಹಣ ಹಾಗೂ ವೇತನ ಮುಂಗಡ ಹಣ ಇವುಗಳನ್ನು ದುರುಪಯೋಗಪಡಿಸಿಕೊಂಡ ಆಪಾದನೆ ಬಗ್ಗೆ ಮೇಲೆ (1) ರಲ್ಲಿ ಓದಲಾದ ಷೋಕಾಸ್ ನೋಟೀಸು ದಿನಾಂಕ:27.06.2003ನ್ನು ದೋಷಾರೋಪಣಾ ಪಟ್ಟಿಯೊಡನೆ ಶ್ರೀ ಎನ್. ಕೃಷ್ಣಮೂರ್ತಿ, ಕೃಷಿ ಅಧಿಕಾರಿ ಹಾಗೂ ಶ್ರೀ ಹೆಚ್.ಎ. ಮಿಶೇರ, ಪ್ರಥಮ ದರ್ಜೆ ಸಹಾಯಕರಿಗೆ ಜಾರಿ ಮಾಡಿ ಲಿಖಿತ ಹೇಳಿಕೆ ಸಲ್ಲಿಸುವಂತೆ ಕೃಷಿ ನಿರ್ದೇಶಕರು ಕೋರಿದ್ದರು.

ಮೇಲೆ (1)ರ ಷೋಕಾಸ್ ನೋಟೀಸನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ:30.06.2003 ರಂದು ಶ್ರೀ ಎನ್. ಕೃಷ್ಣಮೂರ್ತಿಯವರು ಸ್ವೀಕರಿಸಿದ್ದು ಇವರು 15 ದಿನಗಳ ಕಾಲಾವಕಾಶ ಮುಗಿದಿದ್ದರೂ ಸಹ ರಕ್ಷಣಾ ಹೇಳಿಕೆ ಸಲ್ಲಿಸಿರುವುದಿಲ್ಲ. ಶ್ರೀ ಹೆಚ್.ಎ. ಮಿಶೇರ ರವರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಲಿಖಿತ ಹೇಳಿಕೆ ಸಲ್ಲಿಸಿ ಎಲ್ಲಾ ಆರೋಪಗಳನ್ನು ನಿರಾಕರಿಸಿರುತ್ತಾರೆಂದು ಕೃಷಿ ನಿರ್ದೇಶಕರು ತಿಳಿಸಿ, ಈ ಪ್ರಕರಣದ ಸತ್ಯಾಂಶವನ್ನು ತಿಳಿಯಲು ಸಿ.ಸಿ.ಎ. ನಿಯಮ 13ರ ರೀತ್ಯಾ ಜಂಟಿ ವಿಚಾರಣೆ ನಡೆಸಲು ಸರ್ಕಾರವನ್ನು ಕೋರಿರುತ್ತಾರೆ. ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಜಂಟಿ ಇಲಾಖಾ ವಿಚಾರಣೆ ವಹಿಸಲು ತೀರ್ಮಾನಿಸಿ ಮೇಲೆ (4)ರಲ್ಲಿ ಓದಲಾದ ದಿನಾಂಕ:29.11.2003 ರಂದು ವಿಚಾರಣಾಧಿಕಾರಿಗಳನ್ನು ನೇಮಿಸಿ ಆದೇಶಿಸಲಾಗಿದೆ.

ವಿಚಾರಣಾಧಿಕಾರಿಗಳು ಮೇಲೆ (5)ರಲ್ಲಿ ಓದಲಾದ ದಿನಾಂಕ:04.01.2005ರಂದು ವಿಚಾರಣಾ ವರದಿ ಸಲ್ಲಿಸಿದ್ದು, ವರದಿಯಲ್ಲಿ ಶ್ರೀ ಎನ್. ಕೃಷ್ಣಮೂರ್ತಿ, ಕೃಷಿ ಅಧಿಕಾರಿ ಇವರ ಮೇಲೆ ಮಾಡಲಾದ ಮೂರು ಆರೋಪಗಳು ರುಜುವಾತಾಗಿಲ್ಲವೆಂದು ಹಾಗೂ ಶ್ರೀ ಹೆಚ್.ಎ. ಮಿಶೇರ, ಪ್ರಥಮ ದರ್ಜೆ ಸಹಾಯಕರ ಮೇಲೆ ಮಾಡಲಾದ ಮೂರು ಆರೋಪಗಳು ರುಜುವಾತಾಗಿದೆಯೆಂದು ವರದಿ ಮಾಡಿದ್ದಾರೆ.

ಈ ವಿಚಾರಣಾ ವರದಿಯನ್ನು ಮೇಲೆ (6)ರಲ್ಲಿ ಓದಲಾದ ದಿನಾಂಕ:01.06.2005ರ ನೋಟೀಸಿನ ಮೂಲಕ ಶ್ರೀ ಹೆಚ್.ಎ. ಮಿಶೇರ, ಪ್ರಥಮ ದರ್ಜೆ ಸಹಾಯಕ ರವರಿಗೆ ಜಾರಿ ಮಾಡಿ ಮೇಲೆ (7)ರಲ್ಲಿ ಓದಲಾದ ದಿನಾಂಕ:08.09.2005 ರಂದು ಲಿಖಿತ ಹೇಳಿಕೆ ಪಡೆಯಲಾಗಿದ್ದು. ಶ್ರೀ ಮಿಶೇರ ರವರ ಲಿಖಿತ ಹೇಳಿಕೆಯಲ್ಲಿ ವಿಚಾರಣಾ ವರದಿಯಲ್ಲಿನ ತೀರ್ಪಿನಲ್ಲಿ ಕಛೇರಿಯ ಮುಖ್ಯಸ್ಥರನ್ನು ಸಂಪೂರ್ಣ ನಿರ್ದೋಷಿಯೆಂದು ಹಣಕಾಸಿನ ದುರ್ವ್ಯವಹಾರಕ್ಕೆ ಸಂಪೂರ್ಣ ಹೊಣೆಗೆ ಶ್ರೀ ಮಿಶೇರರವರು ಜವಾಬ್ದಾರರೆಂದು, ಇದರಿಂದ ಸಾಮಾಜಿಕ ನ್ಯಾಯಕ್ಕೆ ಹಾಗೂ ಸಿ.ಸಿ.ಎ. ನಿಯಮಗಳಿಗೆ ವಿರುದ್ಧವಾಗಿ ತೀರ್ಪು ನೀಡಲಾಗಿದೆ. ಇನ್ನೊಬ್ಬ ಆಪಾದಿತರ ಹೇಳಿಕೆ ಪಡೆದುಕೊಂಡಿರುವುದಿಲ್ಲ. ಸರ್ಕಾರಿ ಸಾಕ್ಷಿದಾರರ ಹೇಳಿಕೆ ಪಡೆದ ತರುವಾಯ ಪಾಟೀ ಸವಾಲು ಮಾಡಲು ಅವಕಾಶ ಕೊಟ್ಟಿಲ್ಲ, ಸಾಕ್ಷಿದಾರರ ಹೇಳಿಕೆ ಪ್ರತಿ ಒದಗಿಸಿಲ್ಲ. ಶ್ರೀ ಕೃಷ್ಣಮೂರ್ತಿಯವರು ಜೀವಂತ ಇದ್ದಾಗ ವಿಚಾರಣೆ ಪ್ರಾರಂಭಿಸದೆ ಅವರ ಕಾಲವಾದ ನಂತರ ವಿಚಾರಣೆ ಮಾಡಿದ್ದು ದುರುದ್ದೇಶದಿಂದ ಕೂಡಿದೆ ಹಾಗೂ ಹಣ ತೆಗೆಯುವ, ಬಳಸುವ, ಬಟವಾಡೆ ಮಾಡುವ ಯಾವುದೇ ಅಧಿಕಾರವಿಲ್ಲದ ಆಪಾದಿತರನ್ನು ಶ್ರೀ ಎನ್.ಕೃಷ್ಣಮೂರ್ತಿ ಯವರನ್ನು ಉಳಿಸುವ ಅವಸರದಲ್ಲಿ ಅಪಾದನೆಗಳಿಗೆ ಸಂಪೂರ್ಣ ಹೊಣೆಗಾರರನ್ನಾಗಿ ಮಾಡಿ ನೀಡಿರುವ ತೀರ್ಪು ಅಸಹಜವೂ, ಅನ್ಯಾಯಿಕವೂ, ಪಕ್ಷಪಾತದಿಂದ ಕೂಡಿದೆಯೆಂದು, ಈ ವರದಿ ಸ್ವೀಕರಿಸಬಾರದೆಂದು ಅಂಗೀಕರಿಸಿದಲ್ಲಿ ಆರೋಪಮುಕ್ತಗೊಳಿಸಲು ಕೋರಿದ್ದಾರೆ.

ಶ್ರೀ ಕೃಷ್ಣಮೂರ್ತಿಯವರು ಕಛೇರಿ ಕೆಲಸಕ್ಕಾಗಿ ಸಹಿ ಹಾಕಿಕೊಟ್ಟಿರುವ ಪೇಪರನ್ನು ಇಟ್ಟುಕೊಂಡು ಅವುಗಳಲ್ಲಿ ಹಣ ಸಂದಾಯ ರಶೀದಿಗಳನ್ನು ಬೆರಳಚ್ಚು ಮಾಡಿಸಿ ಅವುಗಳನ್ನು ದುರುಪಯೋಗಪಡಿಸಿಕೊಂಡಿರುತ್ತಾರೆ. ಅಂತ ಲಿಖಿತವಾಗಿ ಬರೆದು ಇಟ್ಟ ಪತ್ರವನ್ನು ವಿಚಾರಣಾಧಿಕಾರಿಗಳಾಗಲಿ, ಯಾವ ನಿಯಮಗಳಾಗಲೀ, ಪುಷ್ಟೀಕರಿಸುವುದಿಲ್ಲ. ಹಾಗೂ ಒಪ್ಪುವುದಿಲ್ಲ. ನಗದು ಪುಸ್ತಕಕ್ಕೆ ಬಿಲ್ಲಿಗೆ ಸಹಿ ಮಾಡಿದ ನಂತರ ಅವುಗಳನ್ನು ತಾನು ತಿದ್ದುಪಡಿ ಮಾಡಿದ್ದೇವೆಂದು ಹೇಳುವುದು ಸತ್ಯಕ್ಕೆ ದೂರವಾಗಿದ್ದು, ವಿಚಾರಣಾಧಿಕಾರಿಗಳ ಎದುರಿಗೆ ಸಾಕ್ಷಿ ಹೇಳಿದ ಪಿ.ಡಬ್ಲ್ಯೂ-1 ಅವರಾಗಲೀ ಪಿ.ಡಬ್ಲ್ಯೂ-2 ಅವರಾಗಲೀ ಇದರ ಬಗ್ಗೆ ಹೇಳಿಕೆ ನೀಡಿಲ್ಲ. ಪಿ.ಡಬ್ಲ್ಯೂ-1 ರವರು ತಮ್ಮ ಹೇಳಿಕೆಯಲ್ಲಿ ನಿಶಾನೆ ಪಿ.ಎಸ್. (ಜಿಲ್ಲಾ ಖಜಾನೆ ಅಧಿಕಾರಿಗಳ ಪತ್ರ) ರಂತೆ ಸಾಲ ಮಂಜೂರಾಗಿತ್ತು. ಆದರೆ ಬಟವಾಡೆ ಮಾಡುವಾಗ ಕಡಿಮೆ ಹಣ ಬಟವಾಡೆ ಮಾಡಿ ಉಳಿದ ಮೊತ್ತವನ್ನು ದುರುಪಯೋಗಪಡಿಸಿಕೊಂಡಿರುತ್ತಾರೆಂದು ಹೇಳಿದ ಸಾಕ್ಷಿಗೆ ದಾಖಲೆ ಆಧಾರಗಳೇ ಇಲ್ಲ ಆದ್ದರಿಂದ ಆರೋಪಮುಕ್ತಗೊಳಿಸಲು ಕೋರಿದ್ದಾರೆ.

ವಿಚಾರಣಾಧಿಕಾರಿಗಳ ವಿಚಾರಣಾ ವರದಿಯಲ್ಲಿ ಸಾಕ್ಷಿ ಪುರಾವೆಗಳಿಂದ ಆಪಾದಿತ ಮಿಶೇರ ರವರು ಶ್ರೀ ಡಿ.ಕೆ. ಕೃಷ್ಣಮೂರ್ತಿ ಯವರ ಭವಿಷ್ಯನಿಧಿ ಹಾಗೂ ಶ್ರೀ ಸಿಂಪೀರಯ್ಯ ನವರ ಭವಿಷ್ಯನಿಧಿ ಹಾಗೂ ವೇತನದ ಮುಂಗಡ ಹಣವನ್ನು ದುರುಪಯೋಗಿಪಡಿಸಿಕೊಂಡ ಆಪಾದನೆ ಸಾಬೀತಾಗಿರುವುದರಿಂದ ಅವರ ಹೇಳಿಕೆಯಲ್ಲಿ ಪರಿಗಣಿಸುವಂತಹ ಅಂಶಗಳು ಇಲ್ಲವಾದ್ದರಿಂದ ಇವರು ದುರುದ್ದೇಶಪೂರಿತವಾಗಿ ಸರ್ಕಾರದ ಹಣ ರೂ.28,350-00 ನ್ನು ಸ್ವಂತಕ್ಕಾಗಿ ದುರುಪಯೋಗಪಡಿಸಿರುವುದು ಸ್ಪಷ್ಟವಾಗಿದೆ ಇದೊಂದು ಕ್ರಿಮಿನಲ್ ಕೃತ್ಯ ಆದ್ದರಿಂದ ಇವರ ತಪ್ಪಿಗಾಗಿ ಇವರನ್ನು ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸುವ ಹಾಗೂ ದುರುಪಯೋಗಪಡಿಸಿಕೊಂಡ ರೂ.28,350-00ನ್ನು ಅವರ ಡಿ.ಸಿ.ಆರ್.ಜಿ. ಅಥವಾ ರಜಾ ನಗದೀಕರಣದಿಂದ ಕಡಿತಗೊಳಿಸುವ ದಂಡನೆ ವಿಧಿಸಲು ಹಾಗೂ ಶ್ರೀ ಎನ್. ಕೃಷ್ಣಮೂರ್ತಿ, ಕೃಷಿ ಅಧಿಕಾರಿ ಇವರನ್ನು ಆರೋಪಮುಕ್ತಗೊಳಿಸಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 75 ಕೃಪವಿ 2003, ಬೆಂಗಳೂರು, ದಿನಾಂಕ:23ನೇ ಜನವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಸರ್ಕಾರವು ಶ್ರೀ ಎನ್. ಕೃಷ್ಣಮೂರ್ತಿ, ಕೃಷಿ ಅಧಿಕಾರಿ (ದಿವಂಗತ) ಕೃಷಿ ಪಾಠಶಾಲೆ, ಹಳ್ಳಿಕೆರೆ ಇವರು ನಿಧನ ಹೊಂದಿರುವುದರಿಂದ ಅವರ ಮೇಲಿನ ಆರೋಪದಿಂದ ಮುಕ್ತರನ್ನಾಗಿ ಮಾಡಿ ಆದೇಶಿಸಿದೆ. ಶ್ರೀ ಹೆಚ್.ಎ. ಮಿಶೇರ, ಪ್ರಥಮ ದರ್ಜೆ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬ್ಯಾಡಗಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(vi) ರನ್ವಯ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ. ಹಾಗೂ ಇವರು ದುರುಪಯೋಗಪಡಿಸಿಕೊಂಡ ಹಣ ರೂ.28,350-00 (ಇಪ್ಪತ್ತೈದು ಸಾವಿರದ ಮುನ್ನೂರ ಐವತ್ತು) ಗಳನ್ನು ಅವರ ಡಿ.ಸಿ.ಆರ್.ಜಿ. ಅಥವಾ ರಜಾ ನಗದೀಕರಣ ಸೌಲಭ್ಯದಿಂದ ವಸೂಲು ಮಾಡಲು ಸಹ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಪಿ.ಆರ್. 365

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## COMMERCE AND INDUSTRIES SECRETARIAT

**Sub:** Widening the scope of investigation on illegal mining entrusted to Lokayukta.

**Read:** 1. Notification No. CI 164 MMK 2006, Dated:22.07.2006 and Corrigendum Dated:24.07.2006;

2. Government Order No. FEE 21 FDE 2005, Dated:23.06.2006.

**Preamble:**

Under Section 3 of the Commission of Inquiry Act, 1952, the State Government vide Notification read at (1) above, had appointed Hon'ble Justice U.L. Bhat Commission of Inquiry to inquire into the various aspects of illegal mining and also allegations against the Government. The Commission was given two months time to furnish its interim report based on the documentary evidence and records and six months for submission of final report from the date of Notification.

The time granted to the Commission to submit the Interim Report was extended by four months vide letter No.CI 164 MMM 2006, Dated:26.10.2006.

Though the Government Officials filed statements and affidavits before the Commission along with relevant documents and records, the opposition parties and the complainants, who complained about the irregularities and illegalities in the mining field, refused to take part in the proceedings of the

Commission and boycotted the Commission which resulted in the Commission being unable to function effectively.

In view of the fact that the Commission has not submitted an interim report even after $7^1/_2$ months and Justice U.L. Bhat has informed that he would cease to attend to the work of the Commission from 08.03.2007, the Government being of the opinion that the continued existence of the Commission is unnecessary and accordingly necessary notification has been issued.

In exercise of the powers conferred, under Section 7(2A) of the Karnataka Lokayukta Act, 1984 Government in Forest Department, vide Government Order No. FEE 21 FDE 2005 Dated:23.06.2006, has made a reference to the Lokayukta regarding the allegations of illegal activities in the mining and transportation of Iron ore in the forest lands of Bellary, Hospet and Sandur regions and also issuance of fake permits for thorough investigation and submission of a report to the Government with specific recommendations.

Now, Government, in the interest of the public has decided to widen the scope of investigation entrusted to Lokayukta vide Government Order referred to (2) above, by including the terms of reference contained in the Notification referred to (1) above. Hence this order.

**Government Order No. CI 164 MMM 2006, Bangalore, Dated:12th March, 2007**

In exercise of the powers conferred by Section 7(2-A) of the Karnataka Lokayukta Act, 1984, Karnataka Act 4 of 1985 the Government of Karnataka hereby refers the following actions taken by or with the general or specific approval of public servant specified hereinafter for thorough investigation and submission of a report to Government with specific recommendation expeditiously. The terms of reference are as follows:

(i) The spurt in the international prices of steel and iron ore during last 3-4 years has made the mining and export of high quality iron ore from the mining in Bellary, Tumkur and Chitradurga Districts very lucrative. With the average cost of production of iron ore at around Rs.150 per ton, and the royalities to be paid to the Government being abysmally low at Rs.16.25 per ton for different grades there have been serious systemic distortions due to the high profit margins. This has led to allegations of large scale corruption and complaints of profiteering through illegal mining with the complicity of the authorities in all levels of Government.

(ii) The Government in its orders vide notification No. CI 16 MMM 2003 and No. CI 33 MMM 1994 both Dated:15.03.2003, de-reserved for private, mining an area of 11620 square km in the State, meant for State exploitation/ mining by the public sector and notified the surrender of an area of 6832.48 hectares of prime iron ore bearing lands respectively, which has paved way for distribution of public assets to select private individuals,/ entities without regard to their professional or technical or business background.

(iii) The entrie exercise was undertaken in a manner so as to benefit only a select few individuals/ entities. The main objectives behind de-reservation i.e. to encourage mining based industries, to creat more employment opportunities in private sector, to attract private capital and professional management for optimal use of state mineral resources were given a go by and allotments were made to the applicants on considerations other than merit.

(iv) It has been alleged that in the name of issuing temporary transportation permits to lift and transport iron ore in patta lands [which by itself is nor permissible in law], large scale illegal mining activity was allowed to be carried out for certain period, even in the forest areas, having no link to the survey numbers of patta lands and for transportation of the illegally mined ore from the forest areas on the strength of such forest passes/ transport permits.

(v) It has been reported that the State has been deprived of its revenues. There have been many complaints from transporters associations regarding overloading of Transport vehicles, that illegal gratification was sought for allowing overloading of iron etc., and the repeated complaints and representations by transporters associations, it has been alleged to have not been seriously considered by the Government. It is also alleged that most of the ore not accounted for and transported illegally in excess was the out come of illegal mining activites.

(vi) In the inspection report of the Accountant General of Karnataka for the years 2003-2004 and 2004-2005 on Mysore Minerals Limited (MML), a public sector undertaking, several lapses were pointed out regading various Memorandum of Understandings (MOUs), raising and marketing contracts, joint ventures etc., between Mysore Minierals Ltd., and Private Companies, wherein the interest of MML was compromised to deprive the PSU of the Contractual Entitlements, dividends and profits due to one sided agreements, non-revision or sub-optimal revision of prices resulting in losses amounting to crores of rupees at a time when the mining sector was generating huge profits.

(vii) It has also been noticed that the Iron Ore fines and mud stocks/ low grade ore far in excess of the quantity were allotted arbitrarily to select individulas through Mysore Minieral Ltd., much below the prevailing market price and MMTC price and even below the prices fixed from time to time by MML itself. There have been complaints of certain influential individuals who were part of the power structure within the Government, by manipulating the records and interfering in the affairs of MML, caused huge loss to the Corporation and the State, Similarly major and minor minerals such as granite, managanese and other minerals of the state, for the past several years, have been misused, indiscriminately exploited for benefiting a selected few resulting in loss of revenue to MML and the State.

(viii) This has led to serious allegations and extensive debate on the floor of both the Houses of Legislature with references made to large scale illegalities, irregularities leading to enormous loss to State exchequer and plundering of state mineral wealth. Allegations have been leveled against various authorities of Government of complicity in illegal mining activities, which led the Hon'ble Chief Minister to give an assurance on the floor of the House that in order to ensure highest level of fairness and probity, an impartial inquiry will be ordered in to the illegalities which have taken place in Bellary, Tumkur and Chitradurga Districts.

Now, therefore the Government of Karnataka hereby refers the following issues to the Lokayukta for thorough investigation and submission of report to the Government;

(a) Various alleged illegalities, irregularities, events, issues and executive and other decisions set out in clause (i) to (viii) and to assess the quantum of losses to the Government and to suggest remedial measures to undo such irregularities and illegalities.

(b) To enquire into the affairs so the Mysore Minerals Ltd., (MML) and its commercial activities carried out in a mannet to cause losses to the company and the instances of direct/ indirect political interference/ patronage in the commercial affairs of the company. To fix responsibility and initiate suitable action, both, civil and/ or criminal as may be appropriate, against all persons found responsible, including private contracting parties.

(c) To fix responsibility and initiate suitable action against all public servants including ministers whether in office or otherwise state, its instrucmentalities or State owned Companies/ Corporations or other bodies and authorities, either in collusion with private parties or otherwise for various acts of omission and commission leading to various illegalities, irregularities, events and executive decisions set out in clause (i) to (viii) and also pertaining to issues such as:

(1) the process and timing of disposal of applications, both in case of notified areas and free areas, for grant of Mining Lease, Reconnaissance Permits and Prospecting Licenses;

(2) the irregularities reported in issue of permits by both Forest and Mines departments;

(3) the irregularities reported in trasnsportation of minerals such as overloading, the issue of informal "token systems", transportation without permits etc;

(4) the entire range of the various aspects of illegal mining ranging from encroachments, mining without necessary permits and clearances, mining outside the permitted areas, mining beyong permitted quantities, illegal transportation of minerals etc.

(5) the mining and transportation of major minerals from Patta lands without valid mining leases etc;

(6) the legality in transfer of leases from one lease holder to another. This will include the case wise examination of legality and validity of grant of mining leases, with reference to the

basic policy/ objectives behind the decisions taken to de-reserve the areas meant for exploitation by the public sector held and surrendered areas and the instances of direct or indirect political interference.

(d) All instances where the mandatory regulations and statutory provisions have been given a go-by and not observed, including environmental and other clearances, to directly or indirectly facilitate and/ or encourage illegal and/ or unregulated mining operations and to suggest remedial measures and suitable action against persons found responsible for their commissions and omissions.

(e) Any other related issues, event and/ or instance which the Hon'ble Lokayukta may deem fit and proper to go into the illegal and un-regulated mining and related issues, including de-servation of the areas meant exclusively for public sector in Karnataka's mining regions ask mentioned above.

(f) To comprehensively inquire into the charges, allegations, complaints of misuse and abuse of the office, if any elected representatives, ministers and officers who held or hold offices of profit for pecuniary benefit pertaining to illegal/ unregulated mining and incidental issues thereof, resulting in loss of revenue to the Government of Karnataka and Public Undertakings under the Government of Karnataka.

(g) Illegal granite quarrying in Bangalore Rural District and other Districts.

2. All the documents and records required for investigation shall be furnished by the Commissioner for Mines and Geology, Managing Director, Mysore Minerals Limited and Principal Conservator of Forests, to the Lokayukta.

3. The scope of the investigation and findings by the Hon'ble Lokayukta shall cover the period commencing from 01.01.2000 to 22.07.2006.

By Order and in the name of Governor of Karnataka,

**K. JAYACHANDRA**

Under Secretary to Government,

Commerce and Industries Department.

PR-491

## ಲೋಕೋಪಯೋಗಿ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ, ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಬರುವ 8 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಸಂಕದ: ಮುಇಂ: ರಶಾ: ಎಇ4: ಮಂಗಳೂರು-8: ರಸ್ತೆಗಳನ್ನು ಮೇಲ್ದರ್ಜೆಗೇರಿಸುವುದು: 06-07, ದಿನಾಂಕ:05.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು, ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಬರುವ ಎಂಟು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| 1. | ನೀರ್ ಮಾರ್ಗ-ಅಡ್ಯಾರುಪದವು-ಅರ್ಕುಳ ರಸ್ತೆ. | 6.50 |
| 2. | ಪರಾರಿ-ಉಳಾಯಿಬೆಟ್ಟು-ಮಲ್ಲೂರು ರಸ್ತೆ. | 5.00 |
| 3. | ಗಂಜೀಮಠ-ಕುಪ್ಪೆಪದವು ರಸ್ತೆ. | 5.50 |
| 4. | ಮರವೂರು-ಅದ್ಯಾಪಾಡಿ-ಉಣಿಲೆ-ಕಂದಾವರ ರಸ್ತೆ. | 11.00 |
| 5. | ಕೈಕಂಬ-ಕಾಮ-ಪಾದೆ ರಸ್ತೆ, | 4.50 |
| 6. | ಕುಪ್ಪೆಪದವು-ಇರುವೈಲು-ಮೂಡಬಿದ್ರೆ ರಸ್ತೆ | 16.50 |
| 7. | ಎಡಪದವು-ಪೂಪಾಡಿಕಲ್ಲು-ಬೆಳ್ಳಿಚಾರು ರಸ್ತೆ. | 10.00 |
| 8. | ವಾಮಂಜೂರು-ಪೆರ್ಮಂಕಿಪದವು ರಸ್ತೆ. | 7.00 |
| | **ಒಟ್ಟು** | **66.00** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 186 ಸಿಆರ್‌ಎಂ, 2006, ಬೆಂಗಳೂರು, ದಿನಾಂಕ:3ನೇ ಫೆಬ್ರವರಿ, 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ 8 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| 1. | ನೀರ್ ಮಾರ್ಗ-ಅಡ್ಯಾರುಪದವು-ಅರ್ಕುಳ ರಸ್ತೆ. | 6.50 |
| 2. | ಪರಾರಿ-ಉಳಾಯಿಬೆಟ್ಟು-ಮಲ್ಲೂರು ರಸ್ತೆ. | 5.00 |
| 3. | ಗಂಜೀಮಠ-ಕುಪ್ಪೆಪದವು ರಸ್ತೆ. | 5.50 |
| 4. | ಮರವೂರು-ಅದ್ಯಾಪಾಡಿ-ಉಣಿಲೆ-ಕಂದಾವರ ರಸ್ತೆ. | 11.00 |
| 5. | ಕೈಕಂಬ-ಕಾಮ-ಪಾದೆ ರಸ್ತೆ, | 4.50 |
| 6. | ಕುಪ್ಪೆಪದವು-ಇರುವೈಲು-ಮೂಡಬಿದ್ರೆ ರಸ್ತೆ | 16.50 |
| 7. | ಎಡಪದವು-ಪೂಪಾಡಿಕಲ್ಲು-ಬೆಳ್ಳಿಚಾರು ರಸ್ತೆ. | 10.00 |
| 8. | ವಾಮಂಜೂರು-ಪೆರ್ಮಂಕಿಪದವು ರಸ್ತೆ. | 7.00 |
| | **ಒಟ್ಟು** | **66.00** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ).

ಪಿ.ಆರ್. 347

**ವಿಷಯ:** ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಆನಂದಪುರ ಹೋಬಳಿ, ಕಣ್ಣೂರು ಶ್ರೀ ಕಣ್ಣೇಶ್ವರ ಶ್ರೀ ಬನಶಂಕರಿ ಅಮ್ಮನವರ ದೇವಾಲಯಕ್ಕೆ ಹೋಗುವ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ:ಮುಇಂ:ಸಂಕದ:ರಶಾ: ಸಇಂ-3: ಮೇಲ್ದರ್ಜೆ: 2006-07, ದಿನಾಂಕ:04.12.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಆನಂದಪುರ ಹೋಬಳಿ, ಕಣ್ಣೂರು ಶ್ರೀ ಕಣ್ಣೇಶ್ವರ ಶ್ರೀ ಬನಶಂಕರಿ ಅಮ್ಮನವರ ದೇವಾಲಯಕ್ಕೆ ಹೋಗುವ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| 1. | ರಾಜ್ಯ ಹೆದ್ದಾರಿ ಎಸ್.ಹೆಚ್-1 ರಿಂದ ಕಣ್ಣೂರು ಮಾರ್ಗವಾಗಿ ಹಿರಹರ್ಕ ಸೇರುವ ರಸ್ತೆ. | 4.00 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 361 ಸಿಆರ್‌ಎಂ, 2006, ಬೆಂಗಳೂರು, ದಿನಾಂಕ:3ನೇ ಫೆಬ್ರವರಿ, 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| 1. | ರಾಜ್ಯ ಹೆದ್ದಾರಿ ಎಸ್.ಹೆಚ್-1 ರಿಂದ ಕಣ್ಣೂರು ಮಾರ್ಗವಾಗಿ ಹಿರಹರ್ಕ ಸೇರುವ ರಸ್ತೆ. | 4.00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ).

ಪಿ.ಆರ್. 348

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕಿನ ಒಂದು ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ:ಮುಇಂ:ಸಂಕದ: ಸಎಸ್-1: ಹೊಸಕೋಟೆ: ರಸ್ತೆಮೇಲ್ದರ್ಜೆ: 2006-07, ದಿನಾಂಕ:07.11.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕಿನ ಒಂದು ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| 1. | ಹೊಸಕೋಟೆ ತಾಲ್ಲೂಕಿನ ಬಿಸನಹಳ್ಳಿ, ಕೋಡಿಹಳ್ಳಿ, ದೊಡ್ಡಗಟ್ಟಿಗನಬ್ಬೆ ಮಾರ್ಗ ರಾಷ್ಟ್ರೀಯ ಹೆದ್ದಾರಿ-207 ಸೇರುವ ರಸ್ತೆ. | 5.00 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 329 ಸಿಆರ್ಎಂ, 2006, ಬೆಂಗಳೂರು, ದಿನಾಂಕ:3ನೇ ಫೆಬ್ರವರಿ, 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| 1. | ಹೊಸಕೋಟೆ ತಾಲ್ಲೂಕಿನ ಬಿಸನಹಳ್ಳಿ, ಕೋಡಿಹಳ್ಳಿ, ದೊಡ್ಡಗಟ್ಟಿಗನಬ್ಬೆ ಮಾರ್ಗ ರಾಷ್ಟ್ರೀಯ ಹೆದ್ದಾರಿ-207 ಸೇರುವ ರಸ್ತೆ. | 5.00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 349

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ, ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ:ಸಂಕದ: ಮುಇಂ:ರಶಾ: ಎಇ-4: ಮಂಗಳೂರು-8 ರಸ್ತೆಗಳನ್ನು ಮೇಲ್ದರ್ಜೆಗೇರಿಸುವುದು: 2006-07, ದಿನಾಂಕ:05.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ, ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| 1. | ಶಿರ್ತಾಡಿ-ಮಾರುರು-ಹೊಸಂಗಡಿ ರಸ್ತೆ | 5.00 |
| | **ಒಟ್ಟು** | **5.00** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 327 ಸಿಆರ್ಎಂ, 2006, ಬೆಂಗಳೂರು, ದಿನಾಂಕ:19ನೇ ಫೆಬ್ರವರಿ, 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| 1. | ಶಿರ್ತಾಡಿ-ಮಾರುರು-ಹೊಸಂಗಡಿ ರಸ್ತೆ | 5.00 |
| | **ಒಟ್ಟು** | **5.00** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 350

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಕಂದಾಯ ಸಚಿವಾಲಯ

**ವಿಷಯ:** ಜಿಲ್ಲೆಗಳ ಪುನರ್ ವಿಂಗಡನೆ ಹೊಸ ಜಿಲ್ಲೆಗಳ ರಚನೆ ಸಂಬಂಧ ಜಿಲ್ಲಾ ಪುನರ್ ವಿಂಗಡಣಾ ಸಮಿತಿಯನ್ನು ರಚಿಸುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯದ ಜಿಲ್ಲೆಗಳ ಪುನರ್ ವಿಂಗಡಣೆ ಬಗ್ಗೆ ಪರಿಶೀಲಿಸಿ ವರದಿ ನೀಡಲು ಸರ್ಕಾರವು ಈ ಹಿಂದೆ ಶ್ರೀ ವಾಸುದೇವರಾವ್ ಆಯೋಗ, ಶ್ರೀ ಟಿ.ಎಂ. ಹುಂಡೇಕರ್ ಸಮಿತಿ, ಶ್ರೀ ಪಿ.ಸಿ. ಗದ್ದಿಗೌಡರ್ ಸಮಿತಿಗಳನ್ನು ಅನುಕ್ರಮವಾಗಿ 1973, 1984 ಮತ್ತು 1986ನೇ ಸಾಲಿನಲ್ಲಿ ನೇಮಕ ಮಾಡಿತ್ತು. ಈ ಸಮಿತಿಗಳು ಹೊಸದಾಗಿ 10 ಜಿಲ್ಲೆಗಳನ್ನು ರಚಿಸಲು ಸೂಚಿಸಿದ್ದು, ಅವುಗಳಲ್ಲಿ ಈಗಾಗಲೇ (1) ಬೆಂಗಳೂರು ನಗರ ಜಿಲ್ಲೆ (2) ದಾವಣಗೆರೆ (3) ಬಾಗಲಕೋಟೆ (4) ಗದಗ್ (5) ಹಾವೇರಿ (6) ಕೊಪ್ಪಳ (7) ಚಾಮರಾಜನಗರ ಮತ್ತು (8) ಉಡುಪಿ ಜಿಲ್ಲೆಗಳನ್ನು ರಚಿಸಲಾಗಿದೆ.

ಪ್ರಸ್ತುತ ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಪುನರ್ವಿಂಗಡಿಸಿ ಕನಕಪುರ, ಚನ್ನಪಟ್ಟಣ, ರಾಮನಗರ ಮತ್ತು ಮಾಗಡಿ ತಾಲ್ಲೂಕುಗಳನ್ನೊಳಗೊಂಡ ರಾಮನಗರ ಜಿಲ್ಲೆಯನ್ನಾಗಿಯೂ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ ಹಾಗೂ ಹೊಸಕೋಟೆ ತಾಲ್ಲೂಕುಗಳಿಗೆ ಸೀಮಿತಗೊಳಿಸಲು; ಹಾಗೂ ಕೋಲಾರ ಜಿಲ್ಲೆಯನ್ನು ಪುನರ್ವಿಂಗಡಿಸಿ, ಗೌರಿಬಿದನೂರು, ಶಿಡ್ಲಘಟ್ಟ, ಬಾಗೇಪಲ್ಲಿ, ಚಿಕ್ಕಬಳ್ಳಾಪುರ ಹಾಗೂ ಗುಡಿಬಂಡೆ ತಾಲ್ಲೂಕುಗಳನ್ನೊಳಗೊಂಡ ಚಿಕ್ಕಬಳ್ಳಾಪುರ ಜಿಲ್ಲೆಯನ್ನಾಗಿಯೂ ಹಾಗೂ ತತ್ಪರಿಣಾಮವಾಗಿ ಕೋಲಾರ ಜಿಲ್ಲೆಯನ್ನು ಶ್ರೀನಿವಾಸಪುರ, ಚಿಂತಾಮಣಿ, ಮಾಲೂರು, ಬಂಗಾರಪೇಟೆ, ಮುಳಬಾಗಿಲು ಮತ್ತು ಕೋಲಾರ ತಾಲ್ಲೂಕುಗಳಿಗೆ ಸೀಮಿತಗೊಳಿಸಲು; ಮತ್ತು ಶ್ರೀ ಪಿ.ಸಿ. ಗದ್ದಿಗೌಡರ್ ಸಮಿತಿಯ ಶಿಫಾರಸ್ಸಿನಂತೆ ಈಗಿನ ಬೆಳಗಾಂ ಮತ್ತು ಗುಲ್ಬರ್ಗಾ ಜಿಲ್ಲೆಗಳನ್ನು ಪುನರ್ವಿಂಗಡಿಸಿ ತಲಾ ಒಂದರಂತೆ ಎರಡು ಹೊಸ ಜಿಲ್ಲೆಗಳನ್ನು ರಚಿಸುವ ಬಗ್ಗೆ ಪುನರ್ ಪರಿಶೀಲಿಸಲು ತೀರ್ಮಾನಿಸಲಾಗಿದೆ.

ಪ್ರಸ್ತುತ ಕಾರ್ಯಕ್ಕೆ 3 ಜನ ಸದಸ್ಯರುಗಳ ಹಾಗೂ ಒಬ್ಬ ಅಧ್ಯಕ್ಷರನ್ನು ಹೊಂದಿದ ಒಟ್ಟು 4 ಜನರಿರುವ ಒಂದು ಸಮಿತಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 27 ಭೂದಾಪು 2006, ಬೆಂಗಳೂರು, ದಿನಾಂಕ:21ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಜಿಲ್ಲೆಗಳ ಪುನರ್ ವಿಂಗಡಣೆ ಹಾಗೂ ಹೊಸ ಜಿಲ್ಲೆಗಳ ರಚನೆ ಸಂಬಂಧ ಪರಿಶೀಲಿಸಲು ಸರ್ಕಾರವು ಶ್ರೀ ವಿ. ಬಾಲಸುಬ್ರಮಣಿಯನ್, ನಿವೃತ್ತ ಐ.ಎ.ಎಸ್. ಅಧಿಕಾರಿ ಇವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ 3 ಸದಸ್ಯರನ್ನೊಳಗೊಂಡ ಜಿಲ್ಲಾ ಪುನರ್ವಿಂಗಡಣಾ ಸಮಿತಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಲಾಗಿದೆ.

1) ಶ್ರೀ ಕೆ.ವಿ. ಇರ್ನಿರಾಯ್, ಐ.ಎ.ಎಸ್. (ನಿವೃತ್ತ) ಸದಸ್ಯರು.

2) ಶ್ರೀ ಚಿರಂಜೀವಿ ಸಿಂಗ್, ಐ.ಎ.ಎಸ್. (ನಿವೃತ್ತ) ಸದಸ್ಯರು.

3) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಸದಸ್ಯ- ಕಾರ್ಯದರ್ಶಿ.

ಈ ಸಮಿತಿಯ ವೆಚ್ಚಕ್ಕಾಗಿ ಅಗತ್ಯವಿರುವ ರೂ.10.00 ಲಕ್ಷಗಳನ್ನು ಮುಂದಿನ ಪೂರಕ ಅನುದಾನದಲ್ಲಿ ಒದಗಿಸಲಾಗುವುದು.

ಈ ಸಮಿತಿಯು ಒಟ್ಟಾರೆ 3 ತಿಂಗಳ ಕಾಲಾವಧಿಯಲ್ಲಿ ಈ ಕಾರ್ಯವನ್ನು ಪೂರ್ಣಗೊಳಿಸಿ ವರದಿಯನ್ನು ಸಲ್ಲಿಸುವಂತೆ ಕೋರಲಾಗಿದೆ.

ಸದರಿ ಸಮಿತಿಗೆ ಅಗತ್ಯವಾದ ಕಛೇರಿ, ದೂರವಾಣಿ, ವಾಹನ, ಅಗತ್ಯ ಸಿಬ್ಬಂದಿ ಹಾಗೂ ಲೇಖನ ಸಾಮಗ್ರಿಗಳನ್ನು ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಅವರು ಒದಗಿಸುವುದು.

ಈ ಸಮಿತಿಯು ಸದರಿ ವಿಷಯಕ್ಕೆ ಸಂಬಂಧಪಟ್ಟಂತೆ ಪ್ರವಾಸ ಕೈಗೊಂಡಲ್ಲಿ, ಅಗತ್ಯವಾದ ವ್ಯವಸ್ಥೆಯನ್ನು ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಅವರು ಮಾಡತಕ್ಕದ್ದು.

ಈ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರುಗಳು ಜಾರಿಯಲ್ಲಿರುವ ಸರ್ಕಾರದ ನಿಯಮಗಳಂತೆ ಪ್ರವಾಸ ಭತ್ಯೆ, ದಿನ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ. ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರು ಈ ವೆಚ್ಚವನ್ನು ಸದರಿ ಸಮಿತಿಯ ವೆಚ್ಚಕ್ಕಾಗಿ ಬಿಡುಗಡೆ ಮಾಡಿರುವ ಹಣದಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಆಇ 1131 ವೆಚ್ಚ 7/2006 ದಿನಾಂಕ:11.01.2007ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ಪುರುಷೋತ್ತಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ).

ಪಿ.ಆರ್. 351

## ಒಳಾಡಳಿತ ಸಚಿವಾಲಯ

**ವಿಷಯ:** ಕರ್ನಾಟಕ ಅಗ್ನಿಶಾಮಕ ಮತ್ತು ತುರ್ತು ಸೇವಾ ಇಲಾಖೆಯಲ್ಲಿ 4 ಮೇಲ್ವಿಚಾರಣಾ ಅಧಿಕಾರಿಗಳ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ:**

1) ಪೊಲೀಸ್ ಮಹಾ ನಿರ್ದೇಶಕರು ಹಾಗೂ ಅಗ್ನಿಶಾಮಕ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ (1) 781/ 06, ದಿನಾಂಕ:31.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:31.10.2006ರ ಪತ್ರದಲ್ಲಿ ಪೊಲೀಸ್ ಮಹಾ ನಿರ್ದೇಶಕರ ಹಾಗೂ ನಿರ್ದೇಶಕರು, ಅಗ್ನಿಶಾಮಕ ಸೇವೆಗಳ ಇಲಾಖೆಯರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ ಕರ್ನಾಟಕ ಅಗ್ನಿಶಾಮಕ ಮತ್ತು ತುರ್ತು ಸೇವಾ ಇಲಾಖೆಯು ಒಂದು ಸೇವಾಪರ ಇಲಾಖೆಯಾಗಿದ್ದು, ಪ್ರಸ್ತುತ ರಾಜ್ಯದ ವಿವಿದೆಡೆ 129 ಅಗ್ನಿಶಾಮಕ ಠಾಣೆಗಳನ್ನು ಹೊಂದಿದೆಯೆಂದು, ಇಲಾಖೆಯ ಕಾರ್ಯವ್ಯಾಪ್ತಿಯನ್ನು ರಾಜ್ಯದ ಎಲ್ಲಾ ತಾಲ್ಲೂಕು ಹಾಗೂ ಇತರೆ ಪ್ರಮುಖ ಕೇಂದ್ರಗಳಿಗೆ ವಿಸ್ತರಿಸುವ ಉದ್ದೇಶದಿಂದ ಇಲಾಖೆಯು ರೂ.323.30 ಕೋಟಿ ವೆಚ್ಚದ K-SAFE-2010

ಯೋಜನೆಯೊಂದಕ್ಕೆ ದಿನಾಂಕ:10.08.2005ರಂದು ಸರ್ಕಾರದ ಆಡಳಿತಾತ್ಮಕ ಅನುಮೋದನೆ ದೊರತಿದ್ದು, ಈ ಯೋಜನೆಯನ್ನು 2010-11 ರೊಳಗೆ ಪೂರ್ಣವಾಗಿ ಕಾರ್ಯಗತಗೊಳಿಸಬೇಕಾಗಿರುತ್ತದೆಯೆಂದು, ಈ ಯೋಜನೆಯನ್ನು ಪೂರ್ಣವಾಗಿ ಕಾರ್ಯಗತಗೊಳಿಸುವ ದಿಸೆಯಲ್ಲಿ 77 ಹೊಸ ಅಗ್ನಿಶಾಮಕ ಠಾಣೆಗಳನ್ನು ಮಂಜೂರು ಮಾಡಿದ್ದು, ಈ ಠಾಣೆಗಳನ್ನು ಪ್ರಾರಂಭಿಸಲು ಬೇಕಾದ ಜಮೀನಿನ ಖರೀದಿ, ಕಟ್ಟಡಗಳ ನಿರ್ಮಾಣ, ವಾಹನ ಹಾಗೂ ಉಪಕರಣಗಳ ಖರೀದಿ, ಸಿಬ್ಬಂದಿಗಳ ನೇಮಕಾತಿ ಇತ್ಯಾದಿ ಜವಾಬ್ದಾರಿಯುತ ಕರ್ತವ್ಯಗಳನ್ನು ಸಹ ನಿರ್ವಹಿಸಬೇಕಾಗಿದ್ದು, ಇತ್ತೀಚಿನ ದಿನಗಳಲ್ಲಿ ಅಗ್ನಿಶಮನಕ್ಕಿಂತ ಅಗ್ನಿನಿವಾರಣೆ ಮೇಲೆಂದು ಮನಗಂಡು ಸಾರ್ವಜನಿಕರಲ್ಲಿ ಅರಿವು ಮೂಡಿಸುವ ದಿಸೆಯಲ್ಲಿ ವಿವಿಧ ಆವರಣಗಳ ಪರೀಕ್ಷಣೆ, ನಿರಾಕ್ಷೇಪಣಾ ಹಾಗೂ ಶಿಫಾರಸ್ಸು ಪತ್ರಗಳ ನೀಡುವಿಕೆ ಹಾಗೂ ತರಬೇತಿ ಕಾರ್ಯಕ್ರಮಗಳನ್ನು ಸಹ ಇಲಾಖೆ ನಿರ್ವಹಿಸುತ್ತಿದೆ ಎಂದು ತಿಳಿಸಿರುತ್ತಾರೆ.

ಎಲ್ಲಾ ಕರ್ತವ್ಯಗಳನ್ನು ಹಾಲಿ ಇಲಾಖೆಯಲ್ಲಿ ಲಭ್ಯವಿರುವ ಮೇಲ್ವಿಚಾರಣೆ ಅಧಿಕಾರಿಗಳಿಂದ ಸಮರ್ಪಕವಾಗಿ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಇದಲ್ಲದೆ ಬೆಂಗಳೂರು ಮಹಾನಗರದ ಬೆಳವಣಿಗೆಗೆ ಸರಿಹೊಂದುವಂತೆ ಹಾಗೂ ಸಾರ್ವಜನಿಕರಿಗೆ ಸಮರ್ಪಕ ಸೇವೆಯನ್ನು ನೀಡಲು ಹೆಚ್ಚುವರಿ ಅಧಿಕಾರಿಗಳ ಅವಶ್ಯಕತೆ ಇದೆ. ಆದುದರಿಂದ ಮೇಲೆ ವಿವರಿಸಿರುವ ಎಲ್ಲಾ ಅಂಶಗಳನ್ನು ಪರಿಗಣಿಸಿ, ಪ್ರಸ್ತುತ ಇಲಾಖೆಯ ಕೆಲವು ವಿಭಾಗಗಳಲ್ಲಿರುವ ಕಡಿಮೆ ಕೆಲಸದ ಒತ್ತಡವನ್ನು ಗಮನಿಸಿ ಒಟ್ಟು 7 ಹುದ್ದೆಗಳನ್ನು ಅಧ್ಯರ್ಪಿಸಿ 4 ಉನ್ನತ ಶ್ರೇಣಿಯ ಹುದ್ದೆಗಳ ಸೃಜನೆಗೆ ಅಗ್ನಿಶಾಮಕ ನಿರ್ದೇಶಕರು ಪ್ರಸ್ತಾವಿಸಿರುತ್ತಾರೆ. ವಿವರಗಳು ಈ ಕೆಳಗಿನಂತಿದೆ.

**ಅಧ್ಯರ್ಪಿಸಲಾಗುವ ಹುದ್ದೆಗಳ ವಿವರ**

| | | |
|---|---|---|
| 1) ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆ | 4- | ವೇತನ ಶ್ರೇಣಿ ರೂ.4,150-7,800 |
| 2) ಸಬ್‌ಇನ್ಸ್‌ಪೆಕ್ಟರ್ (ವೈರ್‌ಲೆಸ್) | 3- | ವೇತನ ಶ್ರೇಣಿ ರೂ.5,200-9,580 |
| ಒಟ್ಟು | 7 | |

ಪ್ರಸ್ತುತ ಮುಖ್ಯ ಅಗ್ನಿಶಾಮಕ ಅಧಿಕಾರಿ, ಬೆಂಗಳೂರು ರವರ ಕಛೇರಿಯಲ್ಲಿರುವ ಠಾಣಾಧಿಕಾರಿ ಹಾಗೂ ಸ್ನಾರ್ಕಲ್ ಘಟಕ, ಟಿ.ಟಿ.ಎಲ್. ಘಟಕ ಮತ್ತು ರಕ್ಷಣಾ ಘಟಕದಲ್ಲಿರುವ ಎರಡೆರಡು ಠಾಣಾಧಿಕಾರಿಗಳ ಪೈಕಿ ವೇತನ ಶ್ರೇಣಿ ರೂ.4,150-7,800 ರಲ್ಲಿರುವ ಒಂದೊಂದು ಠಾಣಾಧಿಕಾರಿಗಳ ಹುದ್ದೆಗಳನ್ನು ಹಾಗೂ ಇಲಾಖೆಯ ನಿಸ್ತಂತುಘಟಕದಲ್ಲಿರುವ 5 ಸಬ್ ಇನ್ಸ್‌ಪೆಕ್ಟರ್ ಹುದ್ದೆಗಳ ಪೈಕಿ ವೇತನ ಶ್ರೇಣಿ ರೂ.5,200-9,580 ರಲ್ಲಿರುವ 3 ಸಬ್‌ಇನ್ಸ್‌ಪೆಕ್ಟರ್ ಹುದ್ದೆಗಳನ್ನು ಅಧ್ಯರ್ಪಿಸುವುದರಿಂದ ವಾರ್ಷಿಕ ರೂ.7,60,056-00 ರಷ್ಟು ಉಳಿಕೆಯಾಗುತ್ತದೆಂದು ತಿಳಿಸಿರುತ್ತಾರೆ.

**ಸೃಜಿಸಲು ಪ್ರಸ್ತಾವಿಸಿರುವ ಹುದ್ದೆಗಳ ವಿವರ**

1) ಉಪ ನಿರ್ದೇಶಕರು (ತಾಂತ್ರಿಕ) ಹುದ್ದೆ 1- ವೇತನ ಶ್ರೇಣಿ ರೂ.9,580-14,200

2) ಮುಖ್ಯ ಅಗ್ನಿಶಾಮಕ ಅಧಿಕಾರಿ ಹುದ್ದೆ 1- ವೇತನ ಶ್ರೇಣಿ 8,000-13,400

3) ಪ್ರಾದೇಶಿಕ ಅಗ್ನಿಶಾಮಕ ಅಧಿಕಾರಿ ಹುದ್ದೆ 2- ವೇತನ ಶ್ರೇಣಿ ರೂ.5,575-10,620

ಮೇಲೆ ತಿಳಿಸಿರುವ 4 ಹುದ್ದೆಗಳ ಸೃಜನೆಯಿಂದ ಸರ್ಕಾರಕ್ಕೆ ವಾರ್ಷಿಕ ಒಟ್ಟು ರೂ.7,47,564/- ರಷ್ಟು ಖರ್ಚಾಗುತ್ತದೆ. ಈ ಖರ್ಚನ್ನು ಈಗಾಗಲೇ ಅಧ್ಯರ್ಪಣೆ ಮಾಡಲು ಮೇಲೆ ಪ್ರಸ್ತಾವಿಸಿರುವ 7 ಹುದ್ದೆಗಳ ಉಳಿಕೆ ಹಣ ರೂ.7,60,056/- ಕ್ಕೆ ಹೋಲಿಸಿದರೆ 7 ಹುದ್ದೆಗಳ ಅಧ್ಯರ್ಪಣೆ ಹಾಗೂ 4 ಹುದ್ದೆಗಳ ಸೃಜನೆಯಿಂದ ಸರ್ಕಾರಕ್ಕೆ ಹೆಚ್ಚುವರಿ ಆರ್ಥಿಕ ಹೊರೆಯ ಬದಲು ಉಳಿತಾಯವಾಗುತ್ತದೆ. ಅಲ್ಲದೆ ಇದರಿಂದ ಇಲಾಖೆಯ ಕಾರ್ಯದಕ್ಷತೆ ಹೆಚ್ಚುವ ಸಾಧ್ಯತೆ ಇರುವುದರಿಂದ 4 ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿಗಾಗಿ ಅಗ್ನಿಶಾಮಕ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ಅಗ್ನಿಶಾಮಕ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 194 ಕಅಸೇ 2006, ಬೆಂಗಳೂರು, ದಿನಾಂಕ:17ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಅಗ್ನಿಶಾಮಕ ಇಲಾಖೆಯಲ್ಲಿ ಹಾಲಿ ಇರುವ ಕೆಳದರ್ಜೆಯ 7 ಹುದ್ದೆಗಳನ್ನು (ಅಗ್ನಿಶಾಮಕ ಠಾಣಾಧಿಕಾರಿ ಹುದ್ದೆ-4 ಮತ್ತು (ಸಬ್‌ಇನ್ಸ್‌ಪೆಕ್ಟರ್ ವೈರ್‌ಲೆಸ್-3) ಇವುಗಳನ್ನು ರದ್ದುಗೊಳಿಸಿ ಅವುಗಳ ಬದಲಿಗೆ ಈ ಕೆಳಕಂಡ 4 ಉನ್ನತ ಶ್ರೇಣಿಯ ಹುದ್ದೆಗಳನ್ನು ಸೃಜಿಸಲು ಹಾಗೂ ರದ್ದುಗೊಳಿಸಲಾಗುವ ಹುದ್ದೆಗಳನ್ನು ಮುಂದೆ ಯಾವುದೇ ಕಾರಣಕ್ಕೂ ಮತ್ತೆ ಸೃಜಿಸುವುದಕ್ಕೆ ಪ್ರಸ್ತಾವನೆ ಸಲ್ಲಿಸಬಾರದೆಂಬ ಷರತ್ತಿಗೊಳಪಟ್ಟು ಸರ್ಕಾರವು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

**ಸೃಜಿಸಲು ಪ್ರಸ್ತಾವಿಸಿರುವ ಹುದ್ದೆಗಳು**

| | |
|---|---|
| 1) ಉಪ ನಿರ್ದೇಶಕರು (ತಾಂತ್ರಿಕ) ಹುದ್ದೆ | - 1 |
| 2) ಮುಖ್ಯ ಅಗ್ನಿಶಾಮಕ ಅಧಿಕಾರಿ ಹುದ್ದೆ | - 1 |
| 3) ಪ್ರಾದೇಶಿಕ ಅಗ್ನಿಶಾಮಕ ಅಧಿಕಾರಿ ಹುದ್ದೆ | - 2 |
| ಒಟ್ಟು | - 4 |

ಪ್ರಸ್ತುತ ಬೆಂಗಳೂರು ವಲಯ-1 ಹಾಗೂ ಬೆಂಗಳೂರು ವಲಯ-2 ರಲ್ಲಿರುವ ಅಧಿಕಾರಿಗಳ ಪದನಾಮವನ್ನು ಪ್ರಾದೇಶಿಕ ಅಗ್ನಿಶಾಮಕ ಅಧಿಕಾರಿ ಬೆಂಗಳೂರು ಪೂರ್ವ ಹಾಗೂ ಪ್ರಾದೇಶಿಕ ಅಗ್ನಿಶಾಮಕ ಅಧಿಕಾರಿ ಪಶ್ಚಿಮ ಮತ್ತು ಮೇಲೆ ಸೃಜಿಸಿರುವ ಇನ್ನೆರಡು ಪ್ರಾದೇಶಿಕ ಅಗ್ನಿಶಾಮಕ ಹುದ್ದೆಯನ್ನು ಪ್ರಾದೇಶಿಕ ಅಗ್ನಿಶಾಮಕ ಅಧಿಕಾರಿ ಬೆಂಗಳೂರು ಉತ್ತರ ಹಾಗೂ ಪ್ರಾದೇಶಿಕ ಅಗ್ನಿಶಾಮಕ ಅಧಿಕಾರಿ ಬೆಂಗಳೂರು ದಕ್ಷಿಣ ಎಂದು ಪದನಾಮೀಕರಿಸಲು ಸರ್ಕಾರವು ಅನುಮತಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 81 ವೆಚ್ಚ-6/ 2007, ದಿನಾಂಕ:14.02.2007ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಕೃಷ್ಣಮೂರ್ತಿ**

ಪಿ.ಆರ್. 356

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು)

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರನ್ವಯ ಕರ್ನಾಟಕ ಲೋಕ ಸೇವಾ ಆಯೋಗದ ಮುಖಾಂತರ 1998ನೇ ಸಾಲಿನಲ್ಲಿ ಗ್ರೂಪ್ ಬಿ ವೃಂದದ ಹುದ್ದೆಗೆ ಆಯ್ಕೆಯಾಗಿದ್ದ, ಶ್ರೀಮತಿ ಸತ್ಯವತಿ ಎಂ. ರವರ ಆಯ್ಕೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:**

1) ಸಂಖ್ಯೆ: ಇ(1) 025/ ಪಿಎಸ್‌ಸಿ/ 2005-06, ದಿನಾಂಕ:01.03.2006, ಕರ್ನಾಟಕ ಲೋಕಸೇವಾ ಆಯೋಗದ ಪತ್ರ.
2) ಸಿಆಸುಇ 24 ಸೆನೆನಿ 2006, ದಿನಾಂಕ:06.03.2006 ಸಿಆಸುಇ (ಸೇನಿನಿ) ರವರ ಅನಧಿಕೃತ ಟಿಪ್ಪಣಿ.
3) ಸಇ 79 ಎಲೆಸೇ 2006, ದಿನಾಂಕ:14.03.2006.
4) ಶ್ರೀಮತಿ ಸತ್ಯವತಿ ಎಂ. ರವರ ಮನವಿ ದಿನಾಂಕ:21.03.2006.
5) ಸಇ 79 ಎಲೆಸೇ 2006, ದಿನಾಂಕ:22.04.2006.
6) ಶ್ರೀಮತಿ ಸತ್ಯವತಿ ಎಂ. ರವರ ಮನವಿ ದಿನಾಂಕ:01.10.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಕರ್ನಾಟಕ ಲೋಕಸೇವಾ ಆಯೋಗದ ಪತ್ರದಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರ್‌ಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರಡಿ ಕರ್ನಾಟಕ ಲೋಕಸೇವಾ ಆಯೋಗದಿಂದ ಅಧಿಸೂಚನೆ ಸಂಖ್ಯೆ: ಸಿಎನ್ ಎಫ್‌ಟಿ/ 25/ 2005-06 ಪಿಎಸ್‌ಸಿ ದಿನಾಂಕ:08.02.2006ರಲ್ಲಿ 1998ನೇ ತಂಡದ ಪತ್ರಾಂಕಿತ ಪರೀಕ್ಷಾರ್ಥಿಗಳಾಗಿ ಆಯ್ಕೆಯಾಗಿ ದಿನಾಂಕ:28.02.2006ರ ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ)ಯಲ್ಲಿ ಪ್ರಕಟಿಸಲ್ಪಟ್ಟಿರುವ 36 ಜನ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಆಯ್ಕೆಯಾಗಿದ್ದು, ಆ ಪೈಕಿ ಶ್ರೀಮತಿ ಸತ್ಯವತಿ ಎಂ. (ಕ್ರ.ಸಂ.31)ರವರು ಸಹ ಒಬ್ಬರಾಗಿರುತ್ತಾರೆ.

ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ಸಿಬ್ಬಂದಿ ಆಡಳಿತ ಸುಧಾರಣೆ ಇಲಾಖೆಯು ಸದರಿ ಅಭ್ಯರ್ಥಿಯ ಗುಣ ನಡತೆ ಹಾಗೂ ಪೂರ್ವಚರಿತ್ರೆಯನ್ನು ಪರಿಶೀಲಿಸಲು ಮತ್ತು ವೈದ್ಯಕೀಯ ಪರೀಕ್ಷೆಗೊಳಪಡಿಸಿ ಅವರಿಗೆ ಸೂಕ್ತ ನೇಮಕಾತಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ತದನಂತರ ಮೇಲೆ ಓದಲಾದ (3)ರಲ್ಲಿನ ಪತ್ರದಲ್ಲಿ ಶ್ರೀಮತಿ ಸತ್ಯವತಿ ಎಂ. ರವರಿಗೆ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗಿ ವೈದ್ಯಕೀಯ ವರದಿ ನೀಡುವಂತೆ ಅಧೀಕ್ಷಕರು, ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು ರವರನ್ನು ಕೋರಲಾಗಿತ್ತು.

ಮೇಲೆ ಓದಲಾದ (4)ರಲ್ಲಿ ಮನವಿಯನ್ನು ಶ್ರೀಮತಿ ಸತ್ಯವತಿ ಎಂ. ತಾವು ವಿದೇಶದಲ್ಲಿ ನೆಲೆಸಿರುವುದಾಗಿ ತಿಳಿಸಿ ಕೆಲವು ಕೌಟುಂಬಿಕ ಕಾರಣಗಳ ಹಿನ್ನೆಲೆಯಲ್ಲಿ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗಲು ಕಾಲಾವಕಾಶವನ್ನು ಕೋರಿರುತ್ತಾರೆ. ಅದರಂತೆ ಮೇಲೆ ಓದಲಾದ (5)ರಲ್ಲಿನ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀಮತಿ ಸತ್ಯವತಿ ಎಂ. ರವರಿಗೆ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗಲು ಷರತ್ತಿನೊಂದಿಗೆ ಆರು ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಪುನಃ ಅವರು ಮೇಲೆ ಓದಲಾದ (6)ರಲ್ಲಿನ ಪತ್ರದಲ್ಲಿ ಎರಡನೇ ಬಾರಿಗೆ ಕಾಲಾವಕಾಶವನ್ನು ವಿಸ್ತರಿಸುವಂತೆ ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳನ್ವಯ ಪರಿಶೀಲಿಸಿದ ನಂತರ ಶ್ರೀಮತಿ ಸತ್ಯವತಿ ಎಂ. ರವರು ನಿಗದಿತ ಕಾಲಾವಧಿಯೊಳಗೆ ವೈದ್ಯಕೀಯ ಪರೀಕ್ಷೆಗೆ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗದೇ ಇರುವುದರಿಂದ ಅವರ ಆಯ್ಕೆಯನ್ನು ರದ್ದುಪಡಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 79 ಎಲೆಸೇ 2006, ಬೆಂಗಳೂರು, ದಿನಾಂಕ:5ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರ್‌ಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರಡಿ ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: ಸಿಏಎನ್‌ಟಿ/ 25/ 2005-06/ ಪಿಎಸ್‌ಸಿ, ದಿನಾಂಕ:28.02.2006ರಲ್ಲಿ 1998ನೇ ತಂಡದ ಪತ್ರಾಂಕಿತ ಪರೀಕ್ಷಾರ್ಥಿಯಾಗಿ ದಿನಾಂಕ:28.02.2006ರ ಕರ್ನಾಟಕ ರಾಜ್ಯಪತ್ರದ (ವಿಶೇಷ ಸಂಚಿಕೆ) ಯಲ್ಲಿ ಪ್ರಕಟಿಸಲ್ಪಟ್ಟು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಸಹಾಯಕ ನಿರ್ದೇಶಕರ (ಪ್ರೊಬೇಷನರಿ) ಹುದ್ದೆಗೆ ಆಯ್ಕೆಯಾಗಿರುವ ಈ ಕೆಳಕಂಡ ಅಭ್ಯರ್ಥಿಯ ಆಯ್ಕೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 12 ಉಪ ನಿಯಮ 1(ಎ) ರನ್ವಯ ರದ್ದುಪಡಿಸಲಾಗಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ನೊಂದಣಿ ಕ್ರ.ಸಂ. | ಹುಟ್ಟಿದ ದಿನಾಂಕ | ಮೀಸಲಾತಿ | ಗಳಿಸಿದ್ದ ಅಂಕಗಳು |
|---|---|---|---|---|---|
| 1. | ಶ್ರೀಮತಿ ಸತ್ಯವತಿ ಎಂ.<br>ಮುನಿನಾರಾಯಣ ಆರ್. ರವರ ಮಗಳು, ಮ.ಸಂ. 41, 3ನೇ ಕ್ರಾಸ್, ಮಾಗಡಿ ಮುಖ್ಯ ರಸ್ತೆ, ಹೆಚ್.ವಿ.ಆರ್.ಲೇಔಟ್, ಬೆಂಗಳೂರು-560 079. | 135010 | 21.05.1971 | 2ಎ/ಎಫ್ | 864.00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರಪುರಕರ್ ವೆಂಕಟೇಶ್**

ಪಿ.ಆರ್. 366 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ವಿಷಯ:** ಕೆ.ಸಿ.ಸಿ. ಬ್ಯಾಂಕ್ ನಿಯಮಿತ, ಧಾರವಾಡ ಇದನ್ನು ಪುನಃಶ್ಚೇತನಗೊಳಿಸಲು ಸುಸ್ತಿ ಬೆಳೆಸಾಲ ಮತ್ತು ಮಧ್ಯಮಾವಧಿ ಕೃಷಿ ಸಾಲಗಳ ಮೇಲಿನ ಬಡ್ಡಿ ಮನ್ನಾ ಕುರಿತು.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 107 ಸಿಎಲ್‌ಎಸ್ 2003, ದಿನಾಂಕ:03.09.2003.
2) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 293 ಸಿಸಿಬಿ 2003, ದಿನಾಂಕ:15.09.2003 ಮತ್ತು ದಿನಾಂಕ:22.10.2003.

3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/ 112/ ಕೆಆರ್‌ಎಫ್/ 2003-04, ದಿನಾಂಕ:19.12.2003, 17.01.2004, 15.03.2004, 31.03.2004, 01.04.2004,14.06.2004, 18.06.2004, 29.06.2004, 03.07.2004, 08.07.2004, 23.06.2006 ಮತ್ತು 21.02.2007.

4) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 293 ಸಿಸಿಬಿ 2003, ದಿನಾಂಕ:10.05.2005 ಮತ್ತು 13.06.2005.

5) ಸಕಾರದ ಆದೇಶ ಸಂಖ್ಯೆ: ಸಿಒ 198 ಸಿಸಿಬಿ 2005, ದಿನಾಂಕ: 29.06.2006.

6) ಶ್ರೇಷ್ಠ ನ್ಯಾಯಾಲಯದಲ್ಲಿ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ನಿ., ಸಂಶಿ, ಕುಂದಗೋಳ ತಾಲ್ಲೂಕು ಇದರ ಅಧ್ಯಕ್ಷರು ಸಲ್ಲಿಸಿರುವ ನಿಂದನಾ ಅರ್ಜಿ ಸಂಖ್ಯೆ:29/2007.

7) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 92, ಬಿಆರ್‌ಎಸ್ 2007, ದಿನಾಂಕ:23.02.2007.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಆದೇಶಗಳಲ್ಲಿ ಸರ್ಕಾರವು ಕೆ.ಸಿ.ಸಿ. ಬ್ಯಾಂಕ್ ನಿ., ಧಾರವಾಡ ಇದರ ದಿನಾಂಕ:30.06.2003ಕ್ಕೆ ಬಾಕಿಯಿರುವ ಎಲ್ಲಾ ಸುಸ್ತಿ ಬೆಳೆ ಸಾಲ ಮತ್ತು ಮಧ್ಯಮಾವಧಿ ಕೃಷಿ ಸಾಲಗಳ ಮೇಲಿನ ಪೂರ್ತಿ ಬಡ್ಡಿಯನ್ನು ಮನ್ನಾ ಮಾಡಲು ಮಂಜೂರಾತಿ ನೀಡಿ, ಈ ಸಂಬಂಧದ ನಷ್ಟವನ್ನು ಸರ್ಕಾರ ಅಪೆಕ್ಸ್ ಬ್ಯಾಂಕ್ ಮತ್ತು ಕೆ.ಸಿ.ಸಿ. ಬ್ಯಾಂಕು ಅನುಕ್ರಮವಾಗಿ ಶೇಕಡಾ 50:25:25ರ ಅನುಪಾತದಲ್ಲಿ ಭರಿಸತಕ್ಕದ್ದು ಎಂದು ಆದೇಶಿಸಿರುತ್ತದೆ. ಈ ಸೌಲಭ್ಯವು ದಿನಾಂಕ:31.03.2004ರೊಳಗೆ ಪೂರ್ಣವಾಗಿ ಅಸಲನ್ನು ಮರುಪಾವತಿ ಮಾಡುವ ರೈತರಿಗೆ ಮಾತ್ರ ಲಭ್ಯವಿರುತ್ತದೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಕೆ.ಸಿ.ಸಿ. ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರವು ರೂಪಿಸಿದ ಬಡ್ಡಿ ಮನ್ನಾ ಯೋಜನೆಯನ್ವಯ ದಿನಾಂಕ:31.03.2004ರವರೆಗೆ ರೂ.12068.39 ಲಕ್ಷಗಳ ಅಲ್ಪಾವಧಿ ಸಾಲ ಮತ್ತು ಮಧ್ಯಮಾವಧಿ ಕೃಷಿ ಸಾಲ ವಸೂಲಾಗಿರುತ್ತದೆಂದು ತಿಳಿಸಿ, ರೂ.3673.26 ಲಕ್ಷಗಳ ಮಂಜೂರಾತಿಗಾಗಿ ಸಲ್ಲಿಸಿದ ಪುನರ್‌ಭರಣ ಬಿಲ್ಲುಗಳನ್ನು ಸಹಕಾರ ಸಂಘಗಳ ನಿಬಂಧಕರು ಸಲ್ಲಿಸಿ ರೂ.3673.26 ಲಕ್ಷಗಳನ್ನು ಮಂಜೂರು ಮಾಡಬೇಕೆಂದು ವಿನಂತಿಸಿರುತ್ತಾರೆ. ಆದರೆ, ಮೇಲೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶಗಳ ಪ್ರಕಾರ ಸರ್ಕಾರದ ಬದ್ಧತೆಯು ಕೇವಲ ರೂ.25.00 ಕೋಟಿಗಳಾಗಿರುತ್ತದೆ. ಮೇಲೆ ಓದಲಾದ (4)ರ ಆದೇಶದಲ್ಲಿ ಈ ಬಾಬ್ತು ಮೊದಲ ಕಂತಾಗಿ ರೂ.6.25 ಕೋಟಿಗಳನ್ನು ಹಾಗೂ ಮೇಲೆ ಓದಲಾದ (5)ರ ಆದೇಶದಲ್ಲಿ 2ನೇ ಕಂತಾಗಿ ರೂ.14.6 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (7)ರ ಆದೇಶದಲ್ಲಿ ಆರ್ಥಿಕ ಇಲಾಖೆಯು ಕೆ.ಸಿ.ಸಿ. ಬ್ಯಾಂಕ್ ನಿ. ಧಾರವಾಡ ಇದನ್ನು ಪುನಃಶ್ಚೇತನಗೊಳಿಸಲು ರಾಜ್ಯ ಸರ್ಕಾರದ ಪಾಲು ರೂ.469.00 ಲಕ್ಷಗಳನ್ನು ಹೆಚ್ಚುವರಿ ಸಹಾಯಧನವಾಗಿ ಮಂಜೂರು ಮಾಡಿದೆ.

ಮೇಲ್ಕಂಡ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 165 ಸಿಸಿಬಿ 2006, ದಿನಾಂಕ:27ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕೆ.ಸಿ.ಸಿ. ಬ್ಯಾಂಕ್ ನಿ. ಧಾರವಾಡ ಇವರ ಸುಸ್ತಿ ಬೆಳೆಸಾಲ ಮತ್ತು ಮಧ್ಯಮಾವಧಿ ಕೃಷಿ ಸಾಲಗಳ ಮೇಲಿನ ಬಡ್ಡಿ ಮನ್ನಾ ಮೊಬಲಗನ್ನು ಪುನರ್‌ಭರಿಸುವ ಸಲುವಾಗಿ ರೂ.4.69 ಕೋಟಿ (ರೂಪಾಯಿ ನಾಲ್ಕು ಕೋಟಿ ಅರವತ್ತೊಂಬತ್ತು ಲಕ್ಷಗಳು ಮಾತ್ರ) ಗಳ ಪಾವತಿಗೆ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2006-07ನೆ ಸಾಲಿನ ಲೆಕ್ಕಶೀರ್ಷಿಕೆ 2425-00-107-2-39-106 ಸಹಾಯಧನ (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಪತ್ತು) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀತಿಯ ಮೂಲಕ ಸಹಕಾರಿ ಸಂಘಗಳ ನಿಬಂಧಕರು, ಬೆಂಗಳೂರು ಇವರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 139 ವೆಚ್ಚ-2/07 ದಿನಾಂಕ:26.02.2007ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 367

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ವೈ.ಎನ್. ರುದ್ರಯ್ಯ, ಶಾಖಾಧಿಕಾರಿ, ಭೂ ಮಂಜೂರಾತಿ-1, ಕಂದಾಯ ಇಲಾಖೆ ಇವರು ಅಕ್ರಮ ಸಂಭಾವನೆ ಸ್ವೀಕರಿಸುವಾಗ ಕರ್ನಾಟಕ ಲೋಕಾಯುಕ್ತರ ಬಲೆಗೆ ಸಿಕ್ಕಿ ಬಿದ್ದಿರುವುದರಿಂದ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:**

1) ಪೊಲೀಸ್ ಇನ್ಸ್‌ಪೆಕ್ಟರ್ ಪೊಲೀಸ್ ವಿಂಗ್, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ನೋಟೀಸು ಸಂಖ್ಯೆ: ಲೋ.ಮೊ.ಸಂ.03/07, ಕಲಂ 7,13(1)(ಡಿ) ಸಹವಾಚ 13(2) ಲ.ನಿ.ಕಾ-1988, ದಿನಾಂಕ:09.02.2007.

**ಪ್ರಸ್ತಾವನೆ:**

ದಿನಾಂಕ: 09.02.2007ರಂದು ಓದಲಾದ ಪತ್ರದಂತೆ ಶ್ರೀ ವೈ.ಎನ್. ರುದ್ರಯ್ಯ ಬಿನ್ ನಂಜಪ್ಪ, 54 ವರ್ಷ, ಶಾಖಾಧಿಕಾರಿಗಳು, ಭೂ ಮಂಜೂರಾತಿ-1 ಶಾಖೆ, ಕಂದಾಯ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು ರವರು ಪಿರ್ಯಾದುದಾರರಾದ ಶ್ರೀ ತಿಮ್ಮರಾಯಪ್ಪ ಎಂಬುವವರಿಂದ ಲಂಚದ ಹಣ ಪಡೆದು ಟ್ರಾಪ್ ಬಲೆಯಲ್ಲಿ ಸಿಕಿಬಿದ್ದಿರುತ್ತಾರೆ. ಆದ್ದರಿಂದ ಶ್ರೀ ವೈ.ಎನ್. ರುದ್ರಯ್ಯ ರವರನ್ನು ದಸ್ತಗಿರಿ ಮಾಡಿ ಘನ 23ನೇ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯದ ಮುಂದೆ ಹಾಜರುಪಡಿಸಲಾಗುವುದೆಂದು ನೋಟೀಸ್ ಮೂಲಕ ತಿಳಿಸಿ ಕರೆದುಕೊಂಡು ಹೋಗಿದ್ದಾರೆ. ಈ ದೂರನ್ನು ಆಧರಿಸಿ ಪೊಲೀಸ್ ಇನ್ಸ್‌ಪೆಕ್ಟರ್, ಲೋಕಾಯುಕ್ತ, ಬೆಂಗಳೂರು ರವರು ಶ್ರೀ ವೈ.ಎನ್. ರುದ್ರಯ್ಯ, ಶಾಖಾಧಿಕಾರಿ, ಭೂ ಮಂಜೂರಾತಿ-1 ರವರ ಮೇಲೆ ಭ್ರಷ್ಟಾಚಾರ ನಿರೋಧಕ ಕಾಯ್ದೆ 1988ರ 7, 13(1)(ಡಿ) ಸಹವಾಚ 13(2) ಪ್ರಕಾರ ಪ್ರಕರಣವನ್ನು ದಿನಾಂಕ:09.02.2007ರಂದು ದಾಖಲಿಸಿಕೊಂಡು ಪಂಚಸಾಕ್ಷಿಗಳೊಡನೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ದಿನಾಂಕ:09.02.2007ರಂದು ಬೀಸಿದ ಟ್ರಾಫ್ ಬಲೆಯಲ್ಲಿ ಸಿಕ್ಕಿಬಿದ್ದಿರುವುದರಿಂದ ಸದರಿ ಅಧಿಕಾರಿಗಳ ಮೇಲೆ ಭ್ರಷ್ಟಚಾರ ಆಪಾದನೆಯು ಮೇಲು

ನೋಟಕ್ಕೆ ಸಾಬೀತಾಗಿರುತ್ತದೆಂದು ಹಾಗೂ ಶ್ರೀ ವೈ.ಎನ್. ರುದ್ರಯ್ಯ, ಶಾಖಾಧಿಕಾರಿ, ಭೂ ಮಂಜೂರಾತಿ-1 ರವರು ಪ್ರಕರಣದ ಸುಗಮ ತನಿಖೆಗೆ ಅಡ್ಡಿವುಂಟುಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಶ್ರೀ ವೈ.ಎನ್. ರುದ್ರಯ್ಯ ರವರನ್ನು ದಿನಾಂಕ:09.02.2007ರಂದು ದಸ್ತಗಿರಿ ಮಾಡಿರುವುದರಿಂದ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ನಿರ್ಧರಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 46 ಸಮಿತಿ 2007, ಬೆಂಗಳೂರು, ದಿನಾಂಕ:19ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1) (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈ.ಎನ್. ರುದ್ರಯ್ಯ, ಶಾಖಾಧಿಕಾರಿಗಳು, ಭೂ ಮಂಜೂರಾತಿ-1 ಶಾಖೆ, ಕಂದಾಯ ಇಲಾಖೆ ಇವರ ವಿರುದ್ಧ ಭ್ರಷ್ಟಚಾರ ಆರೋಪದ ವಿಚಾರಣೆಯನ್ನು ಕಾಯ್ದಿರಿಸಿ, ದಿನಾಂಕ:09.02.2007 ರಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ/ ಕಾರ್ಯದರ್ಶಿಗಳು, ಸಿ.ಆ.ಸು. ಇಲಾಖೆ ಇವರ ಅನುಮತಿ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆಂಪವೀರಯ್ಯ**

ಪಿ.ಆರ್. 370

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸಮನ್ವಯ).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಉಪನ ಕಾರ್ಯದರ್ಶಿ, ಕಾರ್ಯದರ್ಶಿ ಹುದ್ದೆಯ ಪದನಾಮವನ್ನು ಮರು ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಸಕಕಾ 80 ಬಿಸಿಎ 92, ದಿನಾಂಕ:22.02.1993.
2) ಸರ್ಕಾರದ ಆದೇಶ ಸಂಖ್ಯೆ: ಸಕಇ 87 ಬಿಸಿಎ 96, ದಿನಾಂಕ:16.01.1996.
3) ಸರ್ಕಾರದ ಆದೇಶ ಸಂಖ್ಯೆ: ಸಕಇ 03 ಬಿಸಿಎ 03, ದಿನಾಂಕ:11.04.2003.
4) ಸರ್ಕಾರದ ಆದೇಶ ಸಂಖ್ಯೆ: ಸಕಇ 49 ಬಿಇಟಿ 05, ದಿನಾಂಕ:27.06.2005.
5) ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆರ್ಯೋಗ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕರಾಹಿಂವಆ/ ಸಿಬ್ಬಂದಿ/ ಸಿಆರ್-15/ 06-07, ದಿನಾಂಕ:07.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ:22.02.1993ರ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ಹಿಂದುಳಿದ ವರ್ಗಗಳ ಶಾಶ್ವತ ಆಯೋಗವನ್ನು ರಚಿಸಿ ಅವಶ್ಯಕ ಸಿಬ್ಬಂದಿಯನ್ನು ಮಂಜೂರು ಮಾಡಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ;16.01.1996ರ ಆದೇಶದಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗಕ್ಕೆ ಮಂಜೂರಾಗಿರುವ ಹುದ್ದೆಗಳ ಪದನಾಮಗಳನ್ನು ಮಾರ್ಪಡಿಸಿ ವೇತನ ಶ್ರೇಣಿ ನಿಗದಿಪಡಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ದಿನಾಂಕ:11.04.2003ರ ಆದೇಶದಲ್ಲಿ ಉಪ ಕಾರ್ಯದರ್ಶಿ (ಸಾಂಖ್ಯಿಕ) ಹುದ್ದೆಯ ವೇತನ ಶ್ರೇಣಿಯನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ಉಪ ಕಾರ್ಯದರ್ಶಿ (ಸಾಂಖ್ಯಿಕ) ಇವರ ವೇತನ ಶ್ರೇಣಿಯನ್ನು ರೂ.10620-14980 ರಿಂದ ರೂ.9580-14700ಗಳಿಗೆ ಇಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಸಂಖ್ಯೆ (4)ರ ದಿನಾಂಕ:27.06.2005ರ ಆದೇಶದಲ್ಲಿ ಉಪ ಕಾರ್ಯದರ್ಶಿ (ಸಾಂಖ್ಯಿಕ) ಇವರ ಹೊಣೆಗಾರಿಕೆ ಮನಗಂಡು ಸರ್ಕಾರ ಸದರಿ ಹುದ್ದೆಯ ವೇತನ ಶ್ರೇಣಿಯನ್ನು ರೂ.10620-14980ರ ಶ್ರೇಣಿಗೆ ಪುನರ್ ನಿಗದಿ ಪಡಿಸಿ ಆದೇಶ ಹೊರಡಿಸಿದೆ.

ಮೇಲೆ ಓದಲಾದ ಕ್ರಮಸಂಖ್ಯೆ: (5)ರ ದಿನಾಂಕ:07.10.2006ರ ಪತ್ರದಲ್ಲಿ ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಲ ಶಾಶ್ವತ ಆಯೋಗ, ಬೆಂಗಳೂರು ಇವರು ಆಯೋಗದಲ್ಲಿ ಉಪ ಕಾರ್ಯದರ್ಶಿ (ಆಡಳಿತ) ಮತ್ತು ಉಪ ಕಾರ್ಯದರ್ಶಿ (ಸಾಂಖ್ಯಿಕ) ಈ 2 ಹುದ್ದೆಗಳಿಗೂ ಉಪ ಕಾರ್ಯದರ್ಶಿ ಎಂದು ಒಂದೇ ಪದನಾಮ ಬಳಸುತ್ತಿದ್ದು ಈ 2 ಹುದ್ದೆಗಳ ಕಾರ್ಯಭಾರದ ಹಿನ್ನೆಲೆಯಲ್ಲಿ ಉನ್ನತ ದರ್ಜೆಯ ಪದನಾಮ ಅಗತ್ಯವಿರುವುದನ್ನು ತಿಳಿಸುತ್ತಾ, ಆಯೋಗದಲ್ಲಿನ ಉಪಕಾರ್ಯದರ್ಶಿ, ಉಪಕಾರ್ಯದರ್ಶಿ (ಸಾಂಖ್ಯಿಕ) ಪದನಾಮವನ್ನು ಕಾರ್ಯದರ್ಶಿ (ಸಾಂಖ್ಯಿಕ) ಎಂಬುದಾಗಿ ಮರು ನಾಮಕರಣ ಮಾಡಿ ಆದೇಶ ಹೊರಡಿಸಲು ಕೋರಿರುತ್ತಾರೆ. ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 218 ಬಿಸಿಎ 2006, ಬೆಂಗಳೂರು, ದಿನಾಂಕ:17ನೇ ಫೆಬ್ರವರಿ, 2007**

ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಶಾಶ್ವತ ಆಯೋಗ, ಬೆಂಗಳೂರು ರವರ ದಿನಾಂಕ:07.10.2006ರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಹಿಂದುಳಿದ ವರ್ಗಗಳ ಆಯೋಗದಲ್ಲಿರುವ ಕಾರ್ಯದರ್ಶಿ, ಉಪಕಾರ್ಯದರ್ಶಿ (ಸಾಂಖ್ಯಿಕ) ಹುದ್ದೆಯ (ವೇತನ ಶ್ರೇಣಿ 10620-14960) ಪದನಾಮಗಳನ್ನು ಈ ಕೆಳಕಂಡಂತೆ ಮರುಪದನಾಮಗೊಳಿಸಿ ಆದೇಶಿಸಲಾಗಿದೆ.

| ಕ್ರ. ಸಂ. | ಪ್ರಸಕ್ತ ಹುದ್ದೆಗಳ ಪದನಾಮ | ಮರು ಪದನಮಗೊಳಿಸಿದ ಹುದ್ದೆ |
|---|---|---|
| 1. | ಕಾರ್ಯದರ್ಶಿ | ಕಾರ್ಯದರ್ಶಿ (ಆಡಳಿತ) |
| 2. | ಉಪ ಕಾರ್ಯದರ್ಶಿ (ಸಾಂಖ್ಯಿಕ) | ಕಾರ್ಯದರ್ಶಿ (ಸಾಂಖ್ಯಿಕ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಪಿ.ಆರ್. 374

ಸರ್ಕಾರದ ಅಧೀನ ಕಾರ್ಯದರ್ಶಿ-II,
ಸಮಾಜ ಕಲ್ಯಾಣ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ ಬಂಟ್ವಾಳ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಸಿದ್ದಪಡಿಸಲಾಗಿರುವ ಮಹಾ ಯೋಜನೆಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**

1) ಸರ್ಕಾರದ ಅಧಿಸೂಚನೆ ಸಂಖ್ಯೆ: ಯುಡಿಡಿ 145 ಎಂಐಬಿ 98, ದಿನಾಂಕ:27.05.1998.
2) ಮುಖ್ಯಾಧಿಕಾರಿಗಳು, ನಗರ ಪಂಚಾಯತ್, ಬಂಟ್ವಾಳ ಇವರ ಪತ್ರ ಸಂಖ್ಯೆ: ಪಬ(5) ಸಿಆರ್:329: 2005-06, ದಿನಾಂಕ:16.03.2006 ಮತ್ತು ದಿನಾಂಕ:19.10.2006.
3) ನಗರ ಯೋಜನಾ ನಿರ್ದೇಶಕರು, ಬೆಂಗಳೂರು ಇವರ ಏಕ ಕಡತ ಸಂಖ್ಯೆ: ನಯೋ (17): ಬಂಮಯೋ (ತಾತ್ಕಾಲಿಕ) 2006, ದಿನಾಂಕ:22.12.206.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರದ ಅಧಿಸೂಚನೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ಪಟ್ಟಣವು ಪುರಸಭೆ ಎಲ್ಲೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನೆ ಕಾಯ್ದೆ 1961ರ ಕಲಂ 4(ಎ) ರಡಿಯಲ್ಲಿ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಬಂಟ್ವಾಳ ಪುರಸಭೆ ಸ್ಥಳೀಯ ಯೋಜನಾ ಪ್ರಾಧಿಕಾರವು ಬಂಟ್ವಾಳ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ (5) ಮತ್ತು ಕಲಂ (10) ರನ್ವಯ ಕ್ರಮ ಜರುಗಿಸಿ ಮಹಾ ಯೋಜನೆಯನ್ನು ತಯಾರಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಿರ್ದೇಶಕರು, ನಗರ ಯೋಜನಾ ಇಲಾಖೆ ರವರು ವರದಿ ಮಾಡಿರುವಂತೆ ಬಂಟ್ವಾಳ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಜನಸಂಖ್ಯೆಯು 2021ರಲಿ 48,000 ಎಂದು ಅಂದಾಜು ಮಾಡಲಾಗಿದೆ. ಪ್ರತಿ ಹೆಕ್ಟೇರಿಗೆ ಜನಸಾಂದ್ರತೆ 100ರಂತೆ ಲೆಕ್ಕ ಹಾಕಿದಾಗ ಅಭಿವೃದ್ಧಿಗಾಗಿ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 2814.00 ಹೆಕ್ಟೇರ್ ಪ್ರದೇಶದಲ್ಲಿ 1166.06 ಹೆಕ್ಟೇರ್ ಪ್ರದೇಶವನ್ನು ನಗರೀಕರಣಕ್ಕಾಗಿ ಪ್ರಸ್ತಾಪಿಸಿ ಮಹಾ ಯೋಜನೆಯನ್ನು ರೂಪಿಸಲಾಗಿದೆ. ಹಾಲಿ ಬೆಳವಣಿಗೆಯು ರಾಷ್ಟ್ರೀಯ ಹೆದ್ದಾರಿ (ಮಂಗಳೂರು-ಹಾಸನ) 48ರ ಅಕ್ಕಪಕ್ಕದಲ್ಲಿ ಮತ್ತು ನೇತ್ರಾವತಿ ನದಿ ದಡದ ಪರಿಸರದಲ್ಲಿ ಹಾಗೂ ಬೆಳ್ತಂಗಡಿ ಜಿಲ್ಲಾ ಮುಖ್ಯರಸ್ತೆಯ ಅಕ್ಕಪಕ್ಕದಲ್ಲಿ ಹೆಚ್ಚಿನ ಬೆಳವಣಿಗೆಗಳು ಬಂದಿರುವುದು ಕಂಡು ಬರುತ್ತದೆ. ಇದರಂತೆ ಬೆಳವಣಿಗೆಯ ದಿಕ್ಕನ್ನು ಪರಿಗಣಿಸಿ ಬಂಟ್ವಾಳ ಪಟ್ಟಣದ ಜನಸಂಖ್ಯೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆಯ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ, ಯೋಜನಾ ತತ್ವಗಳಿಗೆ ಅನುಗುಣವಾಗಿ ಹಾಗೂ ಮಹಾ ಯೋಜನೆಯ ತಯಾರಿಕೆಯ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ (12) ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಯೋಜಿತ ಬೆಳವಣಿಗೆಗಾಗಿ ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ 1166.06 ಹೆಕ್ಟೇರ್ ನಗರೀಕರಣ ಪ್ರದೇಶದಲ್ಲಿ ವಸತಿಗಾಗಿ 705.18 ಹೆ. (ಶೇ.60.47), ವಾಣಿಜ್ಯಕ್ಕಾಗಿ 34.98 ಹೆ. (ಶೇ.3.00) ಕೈಗಾರಿಕೆಗಾಗಿ 18.72 ಹೆ. (ಶೇ.1.60), ಸಾರ್ವಜನಿಕ ಅರೆ ಸಾರ್ವಜನಿಕಕ್ಕಾಗಿ 30.24 ಹೆ. (ಶೇ.2.60), ಸಾರ್ವಜನಿಕ ಉಪಯುಕ್ತತೆ 2.88 ಹೆ. (ಶೇ.0.25), ಉದ್ಯಾನವನ ಬಯಲು ಜಾಗಕ್ಕಾಗಿ 28.80 ಹೆ. (ಶೇ.2.47) ಹಾಗೂ ರಸ್ತೆಗಾಗಿ 345.26 ಹೆ. (ಶೇ.29.61 ವಿಸ್ತೀರ್ಣವನ್ನು ನಿಗದಿಪಡಿಸಲಾಗಿದೆ ಹಾಗೂ ಯೋಜನೆಯನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. 10.0 ಮೀ. ಗಳಿಗೂ ಮೇಲ್ಪಟ್ಟ ಕಟ್ಟಡಗಳಿಗೆ ಭೂ ಕಂಪನ ಸುರಕ್ಷಿತ ನಿಯಮಗಳಲ್ಲಿನ ಅಂಶಗಳನ್ನು, ಮಳೆ ನೀರು ಸಂಗ್ರಹಣೆ, ಸೌರಶಕ್ತಿಯಿಂದ ನೀರು ಕಾಯಿಸುವ ಕುರಿತು, ಅಂಗವಿಕಲರಿಗೆ ಸೌಲಭ್ಯ ಒದಗಿಸುವ ಕುರಿತು, ಏಕ ನಿವೇಶನದ ನಿಯಮಾವಳಿಗಳನ್ನು ಸಹ ಸದರಿ ವಲಯ ನಿಯಮಾವಳಿಗಳಲ್ಲಿ ಸೂಕ್ತವಾಗಿ ಅಳವಡಿಸಲಾಗಿದೆ.

ಬಂಟ್ವಾಳ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1) ರನ್ವಯ ತಾತ್ಕಾಲಿಕ ಅನುಮೋದನೆ ನೀಡಲು ಮೇಲೆ ಓದಲಾದ (3)ರಲ್ಲಿ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 19 ಮೈಅಪ್ರಾ 2007, ಬೆಂಗಳೂರು, ದಿನಾಂಕ:14ನೇ ಫೆಬ್ರವರಿ, 2007**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಬಂಟ್ವಾಳ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಬಂಟ್ವಾಳ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 375

## ಸಹಕಾರ ಸಚಿವಾಲಯ

**ವಿಷಯ:** ಕೃಷಿ ಮಾರಾಟ ಇಲಾಖೆಯಲ್ಲಿನ "ಜಿಲ್ಲಾ ಲೆಕ್ಕಾಪರಿಶೋಧಕರ" ಹುದ್ದೆಯ ಪದನಾಮವನ್ನು "ಮಾರುಕಟ್ಟೆ ಅಧಿಕಾರಿ" ಎಂದು, ಡ್ರಾಫ್ಟ್‌ಮನ್ ಮತ್ತು ಆರ್ಕಿಟೆಕ್ಚರರ್ ಡ್ರಾಫ್ಟ್‌ನ್ ಹುದ್ದೆಗಳನ್ನು ಕಿರಿಯ ಅಭಿಯಂತರರ ಹುದ್ದೆಗಳು ಎಂದು ಮರುಪದನಾಮೀಕರಿಸುವ ಹಾಗೂ ಹೆಡ್ ಡ್ರಾಫ್ಟ್‌ಮನ್ ಹುದ್ದೆಯನ್ನು ರದ್ದುಗೊಳೀಸುವುದು.

**ಓದಲಾಗಿದೆ:**

1) ಆಯುಕ್ತರು, ಕೃಷಿ ಮಾರಾಟ ಇಲಾಖೆ ಇವರ ಪತ್ರ ಸಂಖ್ಯೆ: ಕೃಮಾಇ/ 360/ ಸಿಬ್ಬಂದಿ-1(ಸಿ)/ 2004 ದಿನಾಂಕ:22.12.2006.

**ಪ್ರಸ್ತಾವನೆ:**

ಕೃಷಿ ಮಾರಾಟ ಇಲಾಖೆಯಲ್ಲಿ ಹಾಲಿ ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳ ಕಾರ್ಯಕಾರಿ ಆದೇಶದಲ್ಲಿ "ಜಿಲ್ಲಾ ಲೆಕ್ಕಾಪರಿಶೋಧಕರು" ಎಂಬ ಪದನಾಮ ಹೊಂದಿರುವ ಹುದ್ದೆ ಇದ್ದು, ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುವ ಅಧಿಕಾರಿಗಳು ಮಾರುಕಟ್ಟೆ ಸಮಿತಿಗಳ ಶ್ರೇಣಿಗೆ ಅನುಗುಣವಾಗಿ "ಕಾರ್ಯದರ್ಶಿ" ಅಥವಾ "ಸಹಾಯಕ ಕಾರ್ಯದರ್ಶಿ" ಆಗಿ ಕಾರ್ಯನಿರ್ವಹಿಸುತ್ತಿದ್ದು, ಅವರು ಲೆಕ್ಕಪರಿಶೋಧನೆ ಕೆಲಸವನ್ನು ನಿರ್ವಹಿಸದೇ ಇರುವುದರಿಂದ ಸದರಿ ಪದನಾಮವು ಗೊಂದಲಕ್ಕೆ ಆಸ್ಪದ ನೀಡುವ ಕಾರಣ, ಅದನ್ನು "ಮಾರುಕಟ್ಟೆ ಅಧಿಕಾರಿ" ಎಂದು ಮರುಪದನಾಮೀಕರಿಸಲು ಕೃಷಿ ಮಾರಾಟ ಆಯುಕ್ತರು ಸಂಖ್ಯೆ: ಸಇ 99 ಮಾಇಸೇ 97ರ ಕಡತದಲ್ಲಿ ಪ್ರಸ್ತಾಪಿಸಿರುತ್ತಾರೆ.

ಮೇಲೆ ಓದಲಾದ ದಿನಾಂಕ:22.12.2006ರ ಪತ್ರದಲ್ಲಿ ಕೃಷಿ ಮಾರಾಟ ಇಲಾಖೆಯ ತಾಂತ್ರಿಕ ಕೋಶಕ್ಕೆ ಮಂಜೂರಾಗಿರುವ 17 ಡ್ರಾಫ್ಟ್‌ಮನ್ ಹುದ್ದೆ ಹಾಗೂ 1 ಆರ್ಕಿಟೆಕ್ಚರರ್ ಡ್ರಾಫ್ಟ್‌ಮನ್ ಹುದ್ದೆಗಳ ವೇತನ ಶ್ರೇಣಿ ರೂ.4575-8400 ಇದ್ದು, ಈ ಹುದ್ದೆಗಳನ್ನು ಕಿರಿಯ ಅಭಿಯಂತರರ ಹುದ್ದೆಗಳೆಂದು ಮರುಪದನಮೀಕರಿಸಿ, ಹಾಲಿ ಚಾಲ್ತಿಯಲ್ಲಿರುವ ರೂ.4575-8400ರ ವೇತನ ಶ್ರೇಣಿಯ 9 ಕಿರಿಯ ಅಭಿಯಂತರರ ಹುದ್ದೆಗಳೊಂದಿಗೆ ವಿಲೀನಗೊಳಿಸಿ, ಒಟ್ಟು 27 ಕಿರಿಯ ಅಭಿಯಂತರರ ಒಂದೇ ಪದನಾಮದ ಹುದ್ದೆಗಳನ್ನಾಗಿ ಮರುವಿನ್ಯಾಸಗೊಳಿಸಲು ಪ್ರಸ್ತಾಪಿಸಿರುತ್ತಾರೆ.

ಮುಂದುವರೆದು, ತಾಂತ್ರಿಕ ವಿಭಾಗಕ್ಕೆ 1 ಹೆಡ್ ಡ್ರಾಫ್ಟ್ಸ್‌ಮನ್ ಹುದ್ದೆ ಮಂಜೂರಾಗಿದ್ದು, ಸದರಿ ಪದನಾಮದ ಹುದ್ದೆಯ ಅವಶ್ಯಕತೆ ಇಲ್ಲದ ಕಾರಣ, ಅದನ್ನು ರದ್ದುಪಡಿಸುವಂತೆ ಸಹ ಪ್ರಸ್ತಾಪಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ತರುವಾಯ ಸರ್ಕಾರವು ಈ ಒಂದು ಮರುಪದನಾಮದಿಂದ ಯಾವುದೇ ರೀತಿಯ ಆರ್ಥಿಕ ಹೊರೆ ಸರ್ಕಾರಕ್ಕೆ ಬೀಳದೇ ಇರುವ ಕಾರಣ, ಪ್ರಸ್ತಾವನೆಯನ್ನು ಅಂಗೀಕರಿಸಿ, "ಜಿಲ್ಲಾ ಲೆಕ್ಕಾಪರಿಶೋಧಕರ" ಹುದ್ದೆಯನ್ನು "ಮಾರುಕಟ್ಟೆ ಅಧಿಕಾರಿ" ಎಂದು, 17 ಡ್ರಾಫ್ಟ್‌ಮನ್ ಹಾಗೂ 1 ಆರ್ಕಿಟೆಕ್ಚರರ್ ಡ್ರಾಫ್ಟ್‌ಮನ್ ಹುದ್ದೆಗಳನ್ನು ಕಿರಿಯ ಅಭಿಯತರರ ಹುದ್ದೆಗಳೆಂದು ಮರುಪದನಾಮೀಕರಿಸಿ ಹಾಲಿ ಚಾಲ್ತಿಯಲ್ಲಿರುವ ರೂ.4575-8400ರ ವೇತನ ಶ್ರೇಣಿಯ 9 ಕಿರಿಯ ಅಭಿಯಂತರರ ಹುದ್ದೆಗಳೊಂದಿಗೆ ವಿಲೀನಗೊಳಿಸಿ, ಒಟ್ಟು 27 ಕಿರಿಯ ಅಭಿಯಂತರರ ಒಂದೇ ಪದನಾಮದ ಹುದ್ದೆಗಳನ್ನಾಗಿ ಮರುವಿನ್ಯಾಸಗೊಳಿಸಲು ಹಾಗೂ ಹೆಡ್ ಡ್ರಾಫ್ಟ್‌ಮನ್ ಹುದ್ದೆಯನ್ನು ರದ್ದುಪಡಿಸಲು ತೀರ್ಮಾನಿಸಿದೆ. ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಇ 99 ಮಾಇಸೇ 1997 (ಭಾಗ 2) ಬೆಂಗಳೂರು, ದಿನಾಂಕ:3ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಆದೇಶಿಸಿದೆ.

1. ಕೃಷಿ ಮಾರಾಟ ಇಲಾಖೆಯಲ್ಲಿನ "ಜಿಲ್ಲಾ ಲೆಕ್ಕಾಪರಿಶೋಧಕರ" ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ "ಮಾರುಕಟ್ಟೆ ಅಧಿಕಾರಿ" ಎಂದು ಮರುಪದನಾಮೀಕರಿಸಿದೆ.
2. ಕೃಷಿ ಮಾರಾಟ ಇಲಾಖೆಯ ತಾಂತ್ರಿಕ ವಿಭಾಗದಲ್ಲಿನ ರೂ.4575-8400 ವೇತನ ಶ್ರೇಣಿಯಲ್ಲಿನ 17 ಡ್ರಾಫ್ಟ್‌ಮನ್ ಹಾಗೂ 1 ಆರ್ಕಿಟೆಕ್ಚರರ್ ಡ್ರಾಫ್ಟ್ಸ್‌ಮನ್ ಹುದ್ದೆಗಳನ್ನು ಕಿರಿಯ ಅಭಿಯಂತರರ ಹುದ್ದೆಗಳೆಂದು ಮರುಪದನಾಮೀಕರಿಸಿ ಹಾಲಿ ಚಾಲ್ತಿಯಲ್ಲಿರುವ ರೂ.4575-8400ರ ವೇತನ ಶ್ರೇಣಿಯ 9 ಕಿರಿಯ ಅಬಿಯಂತರರ ಹುದ್ದೆಗಳೊಂದಿಗೆ ವಿಲೀನಗೊಳಿಸಿ, ಒಟ್ಟು 27 ಕಿರಿಯ ಅಭಿಯಂತರರ ಒಂದೇ ಪದನಾಮದ ಹುದ್ದೆಗಳನ್ನಾಗಿ ಮರುವಿನ್ಯಾಸಗೊಳಿಸಿದೆ.
3. ಕೃಷಿ ಮಾರಾಟ ಇಲಾಖೆಯ ತಾಂತ್ರಿಕ ವಿಭಾಗದಲ್ಲಿನ 1 ಹೆಡ್ ಡ್ರಾಫ್ಟ್ಸ್‌ಮನ್ ಹುದ್ದೆಯನ್ನು ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ.ಆರ್. 377

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಶಿವಮೊಗ್ಗ ಶಿವಪ್ಪ ನಾಯಕರ ಅರಮನೆ ಮತ್ತು ಜಿಲ್ಲಾ ಐತಿಹಾಸಿಕ ಸ್ಮಾರಕಗಳ ಅಭಿವೃದ್ಧಿ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 171 ಕೆಎಂಯು 99 ದಿನಾಂಕ:30.03.2000 ಹಾಗೂ ಸೇರ್ಪಡೆ ಆದೇಶ ದಿನಾಂಕ:26.05.2000.
2) ನಿರ್ದೇಶಕರು, ಪ್ರಾ:ವ:ಸಂ: ಅವರ ಪತ್ರ ಸಂಖ್ಯೆ: ಡಿಎಎಂ/ ಎಸಿಟಿ/ 6/ 130/ 2005-06, ದಿನಾಂಕ;31.03.2006 ಮತ್ತು 04.11.2006ಕ್ಕೆ ಅಂತ್ಯಗೊಂಡ ಪತ್ರ ವ್ಯವಹಾರಗಳು.

**ಪ್ರಸ್ತಾವನೆ:**

ಶಿವಮೊಗ್ಗದಲ್ಲಿರುವ ಶಿವಪ್ಪ ನಾಯಕರ ಅರಮನೆ ಹಾಗೂ ಶಿವಮೊಗ್ಗ ಜಿಲ್ಲೆಯಲ್ಲಿರುವ ಭವ್ಯ ಸ್ಮಾರಕಗಳ ಸಂರಕ್ಷಣೆ ಹಾಗೂ ಅಭಿವೃದ್ಧಿಗಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ:30.03.2000 ಹಾಗೂ 26.05.2000ದ ಸರ್ಕಾರಿ ಆದೇಶಗಳಲ್ಲಿ ಕೆಲವು ನಿಬಂಧನೆಗಳನ್ನು ಒಳಪಡಿಸಿ ಮೂರು ವರ್ಷಗಳ ಅವಧಿಗೆ 18 ಸದಸ್ಯರ ಒಂದು ಸಮಿತಿಯನ್ನು ಪುನರ್ ರಚಿಸಲಾಗಿತ್ತು.

ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:04.11.2006ರ ಪತ್ರದಲ್ಲಿ ಶಿವಮೊಗ್ಗ ಶಿವಪ್ಪ ನಾಯಕರ ಅರಮನೆ ಮತ್ತು ಜಿಲ್ಲೆ ಐತಿಹಾಸಿಕ ಭವ್ಯ ಸ್ಮಾರಕಗಳ ಅಭಿವೃದ್ಧಿ ಸಮಿತಿಯನ್ನು ಪುನರ್ ರಚಿಸಿ ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸಂಖ್ಯೆ: ಸಂಕಇ 257 ಕೆಎಂಯು 2005, ಬೆಂಗಳೂರು, ದಿನಾಂಕ:21ನೇ ಫೆಬ್ರವರಿ, 2007**

ಸರ್ಕಾರವು ಶಿವಮೊಗ್ಗದಲ್ಲಿರುವ ಶಿವಪ್ಪ ನಾಯಕರ ಅರಮನೆ ಹಾಗೂ ಶಿವಮೊಗ್ಗ ಜಿಲ್ಲೆಯಲ್ಲಿರುವ ಭವ್ಯ ಸ್ಮಾರಕಗಳ ಸಂರಕ್ಷಣೆ ಮತ್ತು ಅಭಿವೃದ್ಧಿಗಾಗಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ರಚಿಸುತ್ತದೆ.

| | | |
|---|---|---|
| 1. | ಜಿಲ್ಲಾಧಿಕಾರಿ, ಶಿವಮೊಗ್ಗಜಿಲ್ಲೆ | ಅಧ್ಯಕ್ಷರು |
| 2. | ಅಧ್ಯಕ್ಷರು, ಶಿವಮೊಗ್ಗ ನಗರಸಭೆ | ಸದಸ್ಯರು |
| 3. | ಮುಖ್ಯಕಾರ್ಯನಿರ್ವಾಹಣಾಧಿಕಾರಿ, ಜಿಲ್ಲಾ ಪಂಚಾಯತಿ, ಶಿವಮೊಗ್ಗ | ಸದಸ್ಯರು |
| 4. | ಸೂಪರಿಂಟೆಂಡೆಂಟ್ ಆಫ್ ಪೊಲೀಸು, ಶಿವಮೊಗ್ಗ. | ಸದಸ್ಯರು |
| 5. | ಮುಖ್ಯಸ್ಥರು, ಪುರಾತತ್ವ ಮತ್ತು ಇತಿಹಾಸ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಬಿ.ಆರ್.ಪ್ರಾಜೆಕ್ಟ್, ಶಿವಮೊಗ್ಗ | ಸದಸ್ಯರು |
| 6. | ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು | ಸದಸ್ಯರು |
| 7. | ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಬೆಂಗಳೂರು | ಸದಸ್ಯರು |
| 8. | ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ | ಸದಸ್ಯರು |
| 9. | ಆಯುಕ್ತರು, ಶಿವಮೊಗ್ಗ ನಗರಸಭೆ | ಸದಸ್ಯರು |
| 10. | ಶ್ರೀ ಹೆಚ್.ಎಂ. ಚಂದ್ರಶೇಖರಪ್ಪ, ಶಿವಮೊಗ್ಗ | ಸದಸ್ಯರು |
| 11. | ಶ್ರೀ ಸಿದ್ದಯ್ಯ ಹಿರೇಮಠ್, ಶಿವಮೊಗ್ಗ | ಸದಸ್ಯರು |
| 12. | ಸಹಾಯಕ ನಿರ್ದೇಶಕರು, ಸರ್ಕಾರಿ ವಸ್ತು ಸಂಗ್ರಹಾಲಯ, ಶಿವಮೊಗ್ಗ | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯು ನಿಯತಕಾಲಿಕವಾಗಿ ಸಭೆ ಸೇರಿ ಈ ಕೆಳಕಾಣಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಸರ್ಕಾರಕ್ಕೆ ಸಲಹೆ/ ಸೂಚನೆಗಳನ್ನು ನೀಡಬಹುದಾಗಿದೆ.

(1) ಶಿವಮೊಗ್ಗ ನಗರದಲ್ಲಿರುವ ಪ್ರತಿಷ್ಠಿತ ಕೆಳದಿ ಶಿವಪ್ಪ ನಾಯಕರ ಅರಮನೆ ಹಾಗೂ ಶಿವಮೊಗ್ಗ ಜಿಲ್ಲೆಯಲ್ಲಿರುವ ಭವ್ಯ ಸ್ಮಾರಕಗಳ ಅಭಿವೃದ್ಧಿಗೆ ಸಂಬಂಧಿಸಿದಂತೆ ಸೂಕ್ತ ಸಲಹೆಗಳನ್ನು ನೀಡುವುದು.

(2) ಭವ್ಯ ಸ್ಮಾರಕಗಳ ಪ್ರಾಮುಖ್ಯತೆ ಬಗ್ಗೆ ಸಾರ್ವಜನಿಕರಲ್ಲಿ ತಿಳುವಳಿಕೆ ಹುಟ್ಟಿಸಲು ಸಮಿತಿಯು ಕಾರ್ಯಕ್ರಮಗಳನ್ನು ಹಮ್ಮಿಕ್ಕೊಳ್ಳಬಹುದಾಗಿದೆ.

(3) ಸ್ಮಾರಕಗಳ ಪರಿಸರವನ್ನು ಕಾಪಾಡಿಕೊಂಡು ಬರಲು ಸಮಿತಿಯ ಸರ್ಕಾರ ಮತ್ತು ಸಾರ್ವಜನಿಕರ ಮಧ್ಯೆ ಸಂಪರ್ಕ ಸೇತುವೆಯಾಗಿ ಕೆಲಸ ಮಾಡಬಹುದಾಗಿದೆ.

(4) ಸ್ಮಾರಕಗಳ ಸಂರಕ್ಷಣೆಗೆ ಸರ್ಕಾರಕ್ಕೆ ಸಾರ್ವಜನಿಕರಿಂದ ವಂತಿಗೆ ಸಂಗ್ರಹಿಸುವ ಬಗ್ಗೆ ಸಲಹೆ ನೀಡುವುದು.

(5) 1961ನೇ ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳ ಹಾಗೂ ಪುರಾತತ್ವ ನಿವೇಶನಗಳ ಮತ್ತು ಅವಶೇಷಗಳ ಶಾಸನ, 1962ನೇ ಭೂನಿಕ್ಷೇಪ ನಿಧಿ ಕಾಯ್ದೆ ಹಾಗೂ 1972ನೇ ಪ್ರಾಚ್ಯವಸ್ತು ಮತ್ತು ಕಲಾಸಂಪತ್ತು ಶಾಸನಗಳನ್ನು ಯಶಸ್ವಿಯಾಗಿ ಜಾರಿಗೊಳಿಸಲು ಸರ್ಕಾರಕ್ಕೆ ಸೂಕ್ತ ಸಹಕಾರ ನೀಡಬಹುದಾಗಿದೆ.

(6) ಸಮಿತಿಯ ಸಭೆಗೆ ಹಾಜರಾಗಲು ಬರುವ ಸದಸ್ಯರಿಗೆ ಸರ್ಕಾರದಿಂದ ಯಾವುದೇ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ನೀಡಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 378

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಮತ್ತು ಪ್ರವಾಸೋದ್ಯಮ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿಗಳ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ: ಕಂಇ 17 ಮುನೊಸೊ 2006 ದಿನಾಂಕ:06.06.2006.

2) ಆಡಳಿತಾಧಿಕಾರಿಗಳು ಹಾಗೂ ಹಿರಿಯ ಉಪ ವಿಭಾಗಾಧಿಕಾರಿ, ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಡಿವಿಎಸ್.ಎ.ಡಿ.ಎಂ.ಸಿ.ಆರ್. -1/ 06-07 ದಿನಾಂಕ:29.12.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಸಾರ್ವಜನಿಕ ಹಾಗೂ ಮಕ್ಕಳ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿತ್ತು. ಆ ಪ್ರಕಾರ ದಿನಾಂಕ:07.06.2006 ರಂದು ಕರ್ತವ್ಯಭಾರ ವಹಿಸಿಕೊಂಡಿರುತ್ತಾರೆ. ಮೇಲೆ ಓದಲಾದ (2)ರಲ್ಲಿ ಆಡಳಿತಾಧಿಕಾರಿಯವರು ಸಲ್ಲಿಸಿರುವ ವರದಿಯಲ್ಲಿ ಆಡಳಿತ ಮಂಡಳಿಯ ಪರ ಹಾಗೂ ವಿರುದ್ಧ ಸಿವಿಲ್ ನ್ಯಾಯಾಲಯದಲ್ಲಿರುವ ನಾಲ್ಕು ಸಿವಿಲ್ ದಾವೆಗಳು ಇನ್ನೂ ಇತ್ಯರ್ಥವಾಗಿಲ್ಲದ ಕಾರಣ ಆಡಳಿತಾಧಿಕಾರಿಗಳ ಆಡಳಿತ ಅವಧಿಯನ್ನು ದಿನಾಂಕ:07.12.2006 ರಿಂದ ಮುಂದಿನ ಆರು ತಿಂಗಳವರೆಗೆ ವಿಸ್ತರಿಸಲು ಕೋರಿರುತ್ತಾರೆ. ಆದ್ದರಿಂದ ಓದಲಾದ (2)ರ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಸಂಸ್ಥೆಗೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 17 ಮುನೊಸೊ 2006, ಬೆಂಗಳೂರು, ದಿನಾಂಕ:24ನೇ ಫೆಬ್ರವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ದೇಶೀಯ ವಿದ್ಯಾ ಶಾಲಾ ಸಮಿತಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಹಿರಿಯ ಉಪ ವಿಭಾಗಾಧಿಕಾರಿ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಜಿಲ್ಲೆ ಇವರನ್ನು ಆಡಳಿತಾಧಿಕಾರಿಯಾಗಿ ನೇಮಕ ಮಾಡಿದ್ದು, ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ:06.12.2006 ರಿಂದ ಮುಂದಿನ 6 ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ. ಆಡಳಿತಾಧಿಕಾರಿಯವರು ಈ ವಿಸ್ತರಿಸಿದ ಅವಧಿಯೊಳಗೆ ಕಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಲಿಂಗ**
ಪೀಠಾಧಿಕಾರಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 380

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉಪ ನೋಂದಣಿ ಕಛೇರಿಗಳ ಕಟ್ಟಡ ಕಟ್ಟಲು ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಕಂಇ 1 ಮುನೋಸ 2006, ದಿನಾಂಕ:25.04.2006.
2) ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಮುನೋಸ 2006, ದಿನಾಂಕ:06.09.2006.
3) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ-4/ 05-06, ದಿನಾಂಕ:31.01.2007.
4) ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಮುನೋಸ 2006 (ಭಾಗ), ದಿನಾಂಕ:31.01.2007.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ಮತ್ತು (2)ರ ದಿನಾಂಕ:25.04.2006 ಹಾಗೂ ದಿನಾಂಕ:06.09.2006ರ ಆದೇಶದಲ್ಲಿ 2006-07ನೇ ಸಾಲಿನ ಆಯವ್ಯಯದಲ್ಲಿ ಅಳವಡಿಸಲಾದ ರೂ.2.00 ಕೋಟಿ ಮೊತ್ತದಲ್ಲಿ ಉಪ ನೋಂದಣಿ/ ಜಿಲ್ಲಾ ನೋಂದಣಿ ಕಛೇರಿ ಕಟ್ಟಡ ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶಿಸಿದೆ.

ಕಟ್ಟಡ ನಿರ್ಮಾಣ ಕಾರ್ಯಗಳನ್ನು ಕರ್ನಾಟಕ ಗೃಹ ಮಂಡಳಿಗೆ ವಹಿಸಲಾಗಿದೆ. ಆ ಪ್ರಕಾರ ಅನುದಾನದ ಮಿತಿಯೊಳಗೆ ಹಾಗೂ ಕಟ್ಟಡಗಳ ನಕ್ಷೆ ಅನುಮೋದನೆಯಂತೆ ಕಟ್ಟಡಗಳ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸುವ ಷರತ್ತುಗಳಿಗೊಳಪಟ್ಟು ಹಣವನ್ನು ಬಿಡುಗಡೆ ಮಾಡಲು ಮೇಲೆ ಓದಲಾಗಿರುವ (3)ರ ದಿನಾಂಕ:31.01.2007ರ ಪತ್ರದ ಮೇರೆಗೆ ಮೇಲೆ ಓದಲಾಗಿರುವ (4)ರ ದಿನಾಂಕ: 31.01.2007ರ ಸರ್ಕಾರದ ಆದೇಶದಲ್ಲಿ ತುಮಕೂರು ಉಪ ನೋಂದಣಿ ಕಛೇರಿ, ಚಿತ್ರದುರ್ಗ ಉಪ ನೋಂದಣಿ ಕಛೇರಿ ಹಾಗೂ ಹಾಸನ ಜಿಲ್ಲಾ ನೋಂದಣಿ ಕಛೇರಿ ಇವುಗಳಿಗೆ ಪೂರ್ಣ ಮೊತ್ತ ಬಿಡುಗಡೆಗೊಳಿಸಿ ಆದೇಶಿಸಿದೆ. ಇನ್ನುಳಿದ ಉಪ ನೋಂದಣಿ/ ಜಿಲ್ಲಾ ನೋಂದಣಿ ಕಛೇರಿಗಳಿಗೆ ನಿಗದಿಪಡಿಸಲಾದ ಮೊತ್ತವನ್ನು ಕರ್ನಾಟಕ ಗೃಹ ಮಂಡಳಿಗೆ ಅನುದಾನದ ಮಿತಿಯೊಳಗೆ ಹಾಗೂ ಕಟ್ಟಡದ ನಕ್ಷೆ ಅನುಮೋದನೆಯಂತೆ ಕಟ್ಟಡಗಳ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸುವ ಷರತ್ತಿಗೊಳಪಟ್ಟು ಕರ್ನಾಟಕ ಗೃಹ ಮಂಡಳಿಗೆ ಅನುದಾನ ಬಿಡುಗಡೆಗೊಳಿಸಬೇಕಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 37 ಮುನೋಸ 2006 (ಭಾಗ), ಬೆಂಗಳೂರು, ದಿನಾಂಕ:13ನೇ ಫೆಬ್ರವರಿ, 2007**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಅಧೀನದಲ್ಲಿ ಬರುವ ಈ ಕೆಳಕಂಡ ಉಪ ನೋಂದಣಿ ಹಾಗೂ ಜಿಲ್ಲಾ ನೋಂದಣಿ ಕಛೇರಿ ಕಟ್ಟಡ ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶಿಸಿದೆ. ಸದರಿ ಆದೇಶದ ಅನ್ವಯ ಅನುದಾನದ ಮಿತಿ ಹಾಗೂ ಕಟ್ಟಡ ನೀಲಿ ನಕ್ಷೆಯ ಅನುಮೋದನೆಯಂತೆ ಕಟ್ಟಡಗಳ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸುವ ಷರತ್ತಿಗೊಳಪಟ್ಟು ಅವುಗಳ ಮುಂದೆ ಸೂಚಿಸಿರುವ ಮೊತ್ತವನ್ನು ಕರ್ನಾಟಕ ಗೃಹ ಮಂಡಳಿಗೆ ಬಿಡುಗಡೆಗೊಳಿಸಿ ಆದೇಶಿಸಿದೆ.

| ಕ್ರ.ಸಂ. | ಉಪ / ಜಿಲ್ಲಾ ನೋಂದಣಿ ಕಛೇರಿ | ಲಕ್ಷ ರೂ.ಗಳಲ್ಲಿ |
|---|---|---|
| 1. | ಬಾಣಾವರ ಉಪ ನೋಂದಣಿ ಕಛೇರಿ | 15.00 |
| 2. | ತಿಪಟೂರು ಉಪ ನೋಂದಣಿ ಕಛೇರಿ | 20.00 |
| 3. | ಕುರುಗೋಡು ಉಪ ನೋಂದಣಿ ಕಛೇರಿ | 14.72 |
| 4. | ಮಂಗಳೂರು ನಗರ ಮತ್ತು ಗ್ರಾಮಾಂತರ ಉಪ ನೋಂದಣಿ ಕಛೇರಿ | 40.00 |

2) ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 4059-80-051-0-30-386 (ಯೋಜನೆ) 2006-07ರಲ್ಲಿ ಭರಿಸತಕ್ಕದ್ದು.

3) ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996ರಲ್ಲಿ ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಫ್. ಯರಗೊಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 381

## ಒಳಾಡಳಿತ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 60ರ ಅಡಿಯಲ್ಲಿ ಮುಂಬಡ್ತಿಯನ್ನು ನಿಯಮಾನುಗೊಳಿಸುವ ಬಗ್ಗೆ.

**ಓದಲಾಗಿದೆ:**

1) ಅಧಿಸೂಚನೆ ಸಂಖ್ಯೆ: ಒಇ 25 ಪಿಪಿಇ 2004 ದಿನಾಂಕ:21.07.2005.
2) ಲೆಕ್ಕಪತ್ರಾಧಿಕಾರಿ, ಮಹಲೇಖಪಾಲರ ಕಛೇರಿ (ಎ ಅಂಡ್ ಇ) ಕರ್ನಾಟಕ ಬೆಂಗಳೂರು ಇವರ ಪತ್ರ ನಂ.GE XIII/34/2005-06/ 63334,35,36,37 Dated;08.11.2005.
3) ನಿರ್ದೇಶಕರು, ಅಭಿಯೋಗ ಇವತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ನಂ.ಡಿಪಿಎನ್/ ಸಿಶಾ-1/ 243/ 2005-06 ದಿನಾಂಕ:19.01.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾಗಿರುವ ದಿನಾಂಕ:21.07.2005ರ ಅಧಿಸೂಚನೆಯ ಕ್ರಮಸಂಖ್ಯೆ: 17, 21 ಮತ್ತು 23ರಲ್ಲಿ ನಮೂದಿಸಿರುವ ಕ್ರಮವಾಗಿ ಶ್ರೀಮತಿ ಅಂಜಲಿದೇವಿ, ಶ್ರೀ ಬಿ.ಎನ್. ನಾಗರಾಜ್, ಶ್ರೀಮತಿ ಲಕ್ಷ್ಮೀಭಾಯಿ ಮರಪ್ಪ ಯಳಸಂಗೀಕರ್ ಇವರಿಗೆ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಿಂದ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆ/ ಸಹಾಯಕ ಅಭಿಯೋಗ ನಿರ್ದೇಶಕರ (ಗ್ರೂಪ್ "ಎ" ಕಿರಿಯ ಶ್ರೇಣಿ) ಹುದ್ದೆಗೆ ಸ್ಥಾನಪನ್ನ ಅವಧಿಯ ಮೇಲೆ ಮುಂಬಡ್ತಿ ನೀಡಿ ಆದೇಶವನ್ನು ಹೊರಡಿಸಲಾಗಿದೆ ಮತ್ತು ಅವರ ಹೆಸರಿನ ಎದುರು ಸೂಚಿಸಿರುವ ಸ್ಥಾನಗಳಿಗೆ ಸ್ಥಳನಿಯುಕ್ತಗೊಳಿಸಲಾಗಿದೆ. ಸ್ಥಳನಿಯುಕ್ತಿಗೊಳಿಸಲಾದ ಹುದ್ದೆಗಳಲ್ಲಿ ತಃಖ್ತೆಯ ಅಂಕಣ 3ರಲ್ಲಿ ಸೂಚಿಸಿರುವ ಸ್ಥಳಗಳಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಮುಂಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಿರುವ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕ |
|---|---|---|
| 1. | ಶ್ರೀಮತಿ ಅಂಜಲೀದೇವಿ | ಮಂಡನಾಧಿಕಾರಿ, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು (ಖಾಲಿ ಹುದ್ದೆಗೆ ನಿಯೋಜನೆ ಮೇರೆಗೆ) 01.09.2005. |
| 2. | ಶ್ರೀ ಬಿ.ಎನ್. ನಾಗರಾಜ್ | ಮಂಡನಾಧಿಕಾರಿ, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು, (ಖಾಲಿ ಹುದ್ದೆಗೆ ನಿಯೋಜನೆ ಮೇರೆಗೆ) ದಿನಾಂಕ:26.08.2005. |
| 3. | ಶ್ರೀಮತಿ ಲಕ್ಷ್ಮೀಭಾಯಿ ಮರಪ್ಪ ಯಳಸಂಗೀಕರ್ | ಮಂಡನಾಧಿಕಾರಿ, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು (ಖಾಲಿ ಹುದ್ದೆಗೆ ನಿಯೋಜನೆ ಮೇರೆಗೆ) ದಿನಾಂಕ:03.09.2005. |

ಮೇಲೆ 2ರಲ್ಲಿ ಓದಲಾಗಿರುವ ದಿನಾಂಕ:08.11.2005ರ ಮಹಾಲೇಖಪಾಲರ ಪತ್ರದಲ್ಲಿ ಸದರಿ ಮೂವರು ಅಧಿಕಾರಿಗಳಿಗೆ ಅವರ ಸೇವೆಯ/ ಕಾರ್ಯವೃಂದದ/ ಮತ್ತು ಇಲಾಖೆಯ ಹೊರಗೆ ಎನ್‌ಕ್ಯಾಡರ್ ಅಲ್ಲದ ಹುದ್ದೆಯಲ್ಲಿ ಸ್ಥಳ ನಿಯುಕ್ತಿಗೊಳಿಸಿರುವುದರಿಂದ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 60ರ ಅಡಿಯಲ್ಲಿ ಮುಂಬಡ್ತಿಯನ್ನು, ಮುಂಬಡ್ತಿ ಪಡೆದ ಹುದ್ದೆಯಲ್ಲಿ ವೇತನ ನಿಗದಿಗಾಗಿ ನಿಯಮಾನುಗೊಳಿಸುವಂತೆ ಪ್ರಸ್ತಾಪಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಮೂರು ಅಧಿಕಾರಿಗಳ ಮುಂಬಡ್ತಿಯನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 60ರ ಅನುಸಾರ ಸದರಿ ಅಧಿಕಾರಿಗಳಿಗಿಂತ ಜೇಷ್ಠತೆಯಲ್ಲಿ ಆಯಾ ಅಧಿಕಾರಿಗಳ ನಿಕಟ ಕಿರಿಯರಾಗಿರುವ ಅಧಿಕಾರಿಗಳು ಮುಂಬಡ್ತಿ ಪಡೆದ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ/ ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ನಿರ್ದೇಶಾತ್ಮಕ (ಪ್ರೊಫಾರ್ಮ) ಮುಂಬಡ್ತಿಯನ್ನು ನೀಡಲು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 567 ಪಿಪಿಇ 2006, ಬೆಂಗಳೂರು, ದಿನಾಂಕ:22ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ಸೂಚಿಸಿರುವ ಕಾರಣಕ್ಕಾಗಿ ಈ ಕೆಳಕಂಡ ತಃಖ್ತೆಯ ಅಂಕಣ 2ರಲ್ಲಿ ಸೂಚಿಸಿರುವ ಸಹಾಯಕ ಸರ್ಕಾರಿ ಅಭಿಯೋಜಕರಿಗೆ, ಸಹಾಯಕ ಸರ್ಕಾರಿ ಅಭಿಯೋಜಕರ ಜೇಷ್ಠತಾ ಪಟ್ಟಿಯಲ್ಲಿ ನಿಕಟ ಕಿರಿಯರಾಗಿರುವ ಅಂಕಣ 3ರಲ್ಲಿ ಸೂಚಿಸಿರುವ ಅಧಿಕಾರಿಗಳು ಮುಂಬಡ್ತಿ ಪಡೆದ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಯಲ್ಲಿ ಹಾಜರಾದ ದಿನಾಂಕದಿಂದ ಜಾರಿಗೆ ಬರುವಂತೆ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 60ರ ಅಡಿಯಲ್ಲಿ ವೇತನ ನಿಗದಿಯ ಉದ್ದೇಶಕ್ಕಾಗಿ ಪ್ರೊಫಾರ್ಮ ಮುಂಬಡ್ತಿಯನ್ನು ನೀಡಿ ಆದೇಶವನ್ನು ಹೊರಡಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮುಂಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಿರುವ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕ | ಜೇಷ್ಠತೆಯಲ್ಲಿ ನಿಕಟ ಕಿರಿಯ ಅಧಿಕಾರಿಗಳು ಮುಂಬಡ್ತಿ ಪಡೆದ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕ |
|---|---|---|
| 1 | 2 | 3 |
| 1. | ಶ್ರೀಮತಿ ಅಂಜಲೀದೇವಿ, ಮಂಡನಾಧಿಕಾರಿ, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು. (ಖಾಲಿ ಹುದ್ದೆಗೆ ನಿಯೋಜನೆ ಮೇರೆಗೆ) 01.09.2005. | ಶ್ರೀ ಡಿ. ರಮೇಶ್ ಬಾಬು, 12.08.2005. |
| 2. | ಶ್ರೀ ಬಿ.ಎನ್. ನಾಗರಾಜ್ ಮಂಡನಾಧಿಕಾರಿ, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು (ಖಾಲಿ ಹುದ್ದೆಗೆ ನಿಯೋಜನೆ ಮೇರೆಗೆ) ದಿನಾಂಕ:26.08.2005. | ಶ್ರೀ ಸುದರ್ಶನ್ 08.08.2005 |
| 3. | ಶ್ರೀಮತಿ ಲಕ್ಷ್ಮೀಭಾಯಿ ಮರಪ್ಪ ಯಳಸಂಗೀಕರ್, ಮಂಡನಾಧಿಕಾರಿ, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು, (ಖಾಲಿ ಹುದ್ದೆಗೆ ನಿಯೋಜನೆ ಮೇರೆಗೆ) ದಿನಾಂಕ:03.09.2005. | ಶ್ರೀ ಎಸ್.ಆರ್.ಶಿಂಧೆ 10.08.2005 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 391

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

**ವಿಷಯ:** ಶ್ರೀ ಎಂ. ನರಸಪ್ಪ, ಸರ್ಕಾರ ಅಭಿಯೋಜಕರು, ಹಾಸನ ಇವರ ಇಲಾಖಾ ವಿಚಾರಣೆಯ ಬಗ್ಗೆ.

**ಓದಲಾಗಿದೆ:**

1) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್: ಆದಾ-93 (68)/ 99-2000 ದಿನಾಂಕ:18.07.2003.
2) ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಒಇ 592 ಪಿಪಿಇ 2005 ದಿನಾಂಕ:21.11.2006.
3) ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ:08.12.2006.

**ಪ್ರಸ್ತಾವನೆ:**

ಶ್ರೀ ಎಂ. ನರಸಪ್ಪ ಸರ್ಕಾರಿ ಅಭಿಯೋಜಕರು, ಹಾಸನ ಇವರು ಮಡಿಕೇರಿಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸಲ್ಲಿಸಿರುವ 1991ನೇ ಸಾಲಿನ ಆಸ್ತಿ ದಾಯಿತ್ವಗಳ ಪಟ್ಟಿಯಲ್ಲಿ ಮೊದಲ ಬಾರಿಗೆ ಬಳ್ಳಾರಿ ಕೌಲ್‌ಬಜಾರ್ ಮನೆ ನಂ.2ನ್ನು ತಾಯಿಯ ಮನೆಯಿಂದ ಹೆಂಡತಿಗೆ ಉಡುಗೊರೆಯಾಗಿ ಬಂದಿರುವುದಾಗಿ ನಮೂದಿಸಿದ್ದು ಸದರಿ ಸ್ವತ್ತನ್ನು ಪತ್ನಿಯ ಹೆಸರಿನಲ್ಲಿ ಸ್ವೀಕರಿಸಿದ ಬಗ್ಗೆ ದಾಖಲಾತಿಗಳನ್ನು ಸಲ್ಲಿಸಲು ವಿಫಲರಾಗಿ ಬೇಜವಾಬ್ದಾರಿಯಿಂದ ಕರ್ತವ್ಯ ನಿರ್ಲಕ್ಷ ತೋರಿಸಿದ ಸಂಬಂಧ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(i)ರ ಉಪನಿಯಮ(i) ವನ್ನು ಸ್ಪಷ್ಟವಾಗಿ ಉಲ್ಲಂಘಿಸಿದ ಆರೋಪದ ಬಗ್ಗೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ 2ರಲ್ಲಿ ಓದಲಾಗಿರುವ ದಿನಾಂಕ:21.11.2006ರ ಪತ್ರದಲ್ಲಿ ಶ್ರೀ ಎಂ. ನರಸಪ್ಪ ಸರ್ಕಾರಿ ಅಭಿಯೋಜಕರು, ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣ ಪಟ್ಟಿ ಅನುಬಂಧ-1 ರಿಂದ 4ರ ವರೆಗೆ ಜಾರಿ ಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿದ್ದಿತು.

ಮೇಲೆ ಕ್ರಮಾಂಕ 3ರಲ್ಲಿ ಓದಲಾಗಿರುವ ದಿನಾಂಕ:08.12.2006ರಲ್ಲಿ ಆರೋಪಿತ ಸರ್ಕಾರಿ ಅಧಿಕಾರಿ ಶ್ರೀ ಎಂ. ನರಸಪ್ಪ ಇವರು ತಮ್ಮ ಲಿಖಿತ ಪ್ರತಿವಾದದ ಹೇಳಿಕೆಯಲ್ಲಿ ಅವರ ಮೇಲೆ ಮಾಡಿರುವ ಆರೋಪಗಳನ್ನು ನಿರಾಕರಿಸಿ, ಸದರಿ ಉಡುಗೊರೆ ಮೌಖಿಕ ರೂಪದಲ್ಲಿ ಬಂದಿದ್ದು ದಾಖಲೆ ರೂಪದಲ್ಲಿ ಕಾರ್ಯಗತಗೊಳಿಸುವ ಮೊದಲೇ ತಮ್ಮ ಪತ್ನಿಯ ತಂದೆ ತಾಯಿಯವರು ಮರಣ ಹೊಂದಿದ ಕಾರಣ ಪತ್ನಿಯ ಅಣ್ಣಂದಿರು ಉಡುಗೊರೆ ನೀಡಲು ನಿರಾಕರಿಸಿರುತ್ತಾರೆಂದು ತಿಳಿಸಿ ಉದ್ದೇಶಿತ ಇಲಾಖಾ ವಿಚಾರಣೆಯನ್ನು ಕೈಬಿಡಬೇಕೆಂದು ಕೋರಿರುತ್ತಾರೆ.

ಸದರಿ ಆರೋಪಿತ ಸರ್ಕಾರಿ ಅಧಿಕಾರಿ ಶ್ರೀ ಎಂ. ನರಸಪ್ಪ ಇವರು ಸಲ್ಲಿಸಿರುವ ವಿವರಣೆಯು ಸಮಂಜಸವಾಗಿಲ್ಲದಿರುವುದರಿಂದ ಆರೋಪಗಳ ಸತ್ಯಾ ಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 592 ಪಿಪಿಇ 2005, ಬೆಂಗಳೂರು, ದಿನಾಂಕ:22ನೇ ಫೆಬ್ರವರಿ, 2007**

ಶ್ರೀ ಎಂ. ನರಸಪ್ಪ ಸರ್ಕಾರಿ ಅಭಿಯೋಜಕರು, ಹಾಸನ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾಗಿರುವ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಅನುಸಾರ ಇಲಾಖಾ ವಿಚಾರಣೆಯನ್ನು ನಡೆಸಲು ನಿಯಮ (2)ರ ಅಡಿಯಲ್ಲಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಸಂಖ್ಯೆ: 768, 9ನೇ ಮೈನ್, 3ನೇ ಬ್ಲಾಕ್ 3ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು-79 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಪ್ರಕರಣದ ದಾಖಲೆಗಳನ್ನು ಸರ್ಕಾರದ ಪರವಾಗಿ ವಿಚಾರಣಾ ಪ್ರಾಧಿಕಾರಿಯವರ ಮುಂದೆ ಮಂಡಿಸಲು ಮೇಲ್ಕಂಡ ನಿಯಮಗಳ ನಿಯಮ 11(5) (ಸಿ) ರನ್ವಯ ಶ್ರೀ ಎಸ್.ಎನ್. ಪಾಟೀಲ್, ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಕೆಳಕಂಡ ಷರತ್ತುಗಳೊಂದಿಗೆ ಸರ್ಕಾರವು ನೇಮಿಸಿದೆ.

**ಷರತ್ತುಗಳು:**

1. ಇಲಾಖಾ ವಿಚಾರಣೆಯನ್ನು ಕೂಡಲೇ ಪ್ರಾರಂಭಿಸಿ ಎರಡು ತಿಂಗಳೊಳಗೆ ವಿಚಾರಣೆಯನ್ನು ಮುಕ್ತಾಯಗೊಳಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 392

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ. ಮತ್ತು ಸು. ಕಾಫಿಪೋಸ ಮತ್ತು ಅಭಿಯೋಗಗಳು).

## ಶಿಕ್ಷಣ ಸಚಿವಾಲಯ

**ವಿಷಯ:** 2006-07ನೇ ಶೈಕ್ಷಣಿಕ ಸಾಲಿನಿಂದ ಮೈಸೂರಿನ ಜೆ.ಎಸ್.ಎಸ್. ಮಹಾವಿದ್ಯಾಪೀಠದ ಜೆ.ಎಸ್.ಎಸ್. ಶಿಕ್ಷಣ ಕಾಲೇಜಿಗೆ ಕಾಲೇಜಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ: ಇಡಿ 152 ಯುಎಂವಿ 2005, ದಿನಾಂಕ:31.12.2005.

2) ಎನ್.ಸಿ.ಟಿ.ಇ. ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ. F. SRO/NCTE/ B.Sc.Ed/ 2005-06/ 6578, ದಿನಾಂಕ:20.06.2005.

3) ಜೆ.ಎಸ್.ಎಸ್. ಮಹಾವಿದ್ಯಾಪೀಠದ ಕಾರ್ಯನಿರ್ವಾಹಕ ಕಾರ್ಯದರ್ಶಿಯವರ ಪತ್ರ ಸಂಖ್ಯೆ: ಸಿಡಿಎಸ್: ಸಿ:1-33/ 2006-07, ದಿನಾಂಕ:25.01.2007.

**ಪ್ರಸ್ತಾವನೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್./ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ 1993ರ ಎನ್.ಸಿ.ಟಿ.ಇ.ಯ ಅಧಿನಿಯಮದ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಯು ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಸರ್ಕಾರಿ ಆದೇಶ ಸಂಖ್ಯೆ: ಇಡಿ 152 ಯುಎಂವಿ 2005 ದಿನಾಂಕ:31.12.2005ರಲ್ಲಿ ಮೈಸೂರಿನ ಜೆ.ಎಸ್.ಎಸ್. ಮಹಾವಿದ್ಯಾಪೀಠದ ಜೆ.ಎಸ್.ಎಸ್. ಶಿಕ್ಷಣ ಕಾಲೇಜಿನಲ್ಲಿ ಬಿ.ಎ.ಎಡ್. ಮತ್ತು ಬಿ.ಎಸ್ಸಿಎಡ್ ಕೋರ್ಸನ್ನು ತಲಾ 50 (ಐವತ್ತು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಎನ್.ಸಿ.ಟಿ.ಇ. ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ ಸಂಖ್ಯೆ: F.SRO/NCTE/ B.Ed/ 2005-06/ 6578 ದಿನಾಂಕ:21.06.2006ರಲ್ಲಿ ಎನ್.ಸಿ.ಟಿ.ಇ.ಯು ಮೈಸೂರಿನ ಜೆ.ಎಸ್.ಎಸ್. ಮಹಾವಿದ್ಯಾಪೀಠದ ಜೆ.ಎಸ್.ಎಸ್.

ಶಿಕ್ಷಣ ಕಾಲೇಜಿಗೆ ಬಿ.ಎ.ಎಡ್. ಮತ್ತು ಬಿ.ಎಸ್ಸಿ.ಎಡ್ ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ ತಲಾ 50 (ಐವತ್ತು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಮಾನ್ಯತೆ ನೀಡಿದೆ. ಅದಕ್ಕಾಗಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 14 ಯುಎಂವಿ 2007, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ, 2007**

3) 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59ನೇ ಪ್ರಕರಣದ 18ನೇ ಉಪಪ್ರಕರಣದೊಂದಿಗೆ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ)ನ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಜೆ.ಎಸ್.ಎಸ್. ಮಹಾವಿದ್ಯಾಪೀಠದ ಜೆ.ಎಸ್.ಎಸ್. ಶಿಕ್ಷಣ ಕಾಲೇಜಿನ ಬಿ.ಎ.ಎಡ್. ಮತ್ತು ಬಿ.ಎಸ್ಸಿ.ಎಡ್. ಕೋರ್ಸಿಗೆ 2006-07ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ ತಲಾ 50 (ಐವತ್ತು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ**

ಪಿ.ಆರ್. 397

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

## INFRASTRUCTURE DEVELOPMENT SECRETARIAT

**Sub:** Release of funds towards New Cost Sharing Railway Projects-Bangalore-Kengeri-Kengeri-Ramanagaram Doubling Railways projects-reg.

**Read:**

1. G.O. No. IDD 1 NSW 2002 Dated:22.11.2002.
2. G.O. No. IDD 1 NSW 2002 Dated:22.03.2002.
3. G.O. No. IDD 1 NSW 2002 Dated:19.02.2003.
4. G.O. No. IDD 47 NSW 2003 Dated:12.09.2003.
5. G.O. No. IDD 47 NSW 2003 Dated:22.01.2004.
6. G.O. No. IDD 47 NSW 2003 (P) Dated:26.03.2004.
7. G.O. No. IDD 51 NSW 2004 Dated:19.07.2004.
8. G.O. No. IDD 63 IDM 2005 Dated:25.05.2005.
9. G.O. No. IDD 66 NSW 2005 Dated:15.12.2005.
10. G.O. No. IDD 68 NSW 2003 Dated:30.08.2006.
11. The letter of Chief Administrative Officer, SWR, Bangalore vide No. W>359/ CN/BNC/iDeCK Dated:11.12.2006.

**Preamble:**

Government of Karnataka has so far released Rs.29.24 crores towards its share of the Investment on Cost Sharing Projects, through various Government Orders read at Sl.No.1 to 10 above.

2. The Chief Administrative Officer, South Western Railway, Bangalore, in his letter No.W.359/ CN/ BNC/iDeCK Dated:11.12.2006 indicated that the total expenditure between 2002-06 is Rs.51.56 crore and proportionate (2/3) share of Gok is Rs.34.38 crores towards Bangalore-Kengeri-Kengeri-Ramanagaram doubling project. He has requested for immediate deposit of 2/3rd share of Government of Karnataka which comes to Rs.28.00 crores.

3. Government have examined the request of Railways and decided to release an amount of Rs.10.00 crores out of the available funds under the Head of Account "5465-01-190-3-05-211-Cost Sharing for New Projects- INvestments (Plan) towards Cost Sharing Railway Projects-for bangalore-Kengeri-Kengeri-Ramanagaram railway line doubling project. Hence this order.

**Government Order No. IDD 68 NSW 2003, Bangalore, Dated:27th February, 2007**

After careful examination of the request of Railways, Government is pleased to release Rs.10.00 crore (Rupees Ten crore) only being the part of the balance 2/3rd share of Government of Karnataka out of the available funds under the head of account "5465-01-190-3-05-211-Cost Sharing for New Projects-Investments (Plan)" only towards "Cost Sharing Railway Projects"- Bangalore-Kengeri-Kengeri-ramanagaram Doubling Railway Projects.

2. The CFO and Company Secretary, iDeCK, is authorized to draw the amount on Payee's Receipt duly countersigned by the Under Secretary to Government, Infrastructure Development Department and iDeCK shall in-turn deposit the same with the Financial Advisor & Chief Accounts Officer (Cons), South Western Railway, Bangalore.

3. This order issues with the concurrence of the Finance Department, vide its U.O. Note No.FD 147/ Exp-I/07 Dated:17.02.2007.

By Order and in the name of Governor of Karnataka,

PR-395

**N. MANJULA GEETHA**

Under Secretary to Government,

Infrastructure Development Department.

## ನಗರಾಭಿವೃದ್ಧಿ ಸಚಿವಾಲಯ

## ಅಧಿಕೃತ ಜ್ಞಾಪನ

### ಸಂಖ್ಯೆ: ನಅಇ 25 ನಯೋಸೇ 2007, ಬೆಂಗಳೂರು, ದಿನಾಂಕ:26ನೇ ಫೆಬ್ರವರಿ, 2007

**ವಿಷಯ:** ದಿನಾಂಕ:01.01.2007ರಲ್ಲಿದ್ದಂತೆ ನಗರ ಯೋಜನಾ ಜಂಟಿ ನಿರ್ದೇಶಕರ ತಾತ್ಕಾಲಿಕ ಕರಡು ಜ್ಯೇಷ್ಠತಾಪಟ್ಟಿ.

ನಗರ ಯೋಜನಾ ಇಲಾಖೆಯ ಜಂಟಿ ನಿರ್ದೇಶಕರ ದಿನಾಂಕ:01.01.2007ರಲ್ಲಿದ್ದಂತೆ ತಾತ್ಕಾಲಿಕ ಕರಡು ಜ್ಯೇಷ್ಠತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿದೆ. ಈ ಕರಡು ಜ್ಯೇಷ್ಠತಾ ಪಟ್ಟಿಯಲ್ಲಿ ನಿಗದಿಪಡಿಸಿರುವ ಹೆಸರು, ಪದನಾಮ, ಸ್ಥಾನ, ಸೇವಾ ವಿವರಗಳು ಇತ್ಯಾದಿಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಅವಶ್ಯಕವಾದ ದಾಖಲೆಗಳೊಂದಿಗೆ ಹಾಗೂ ಅನುಸಮರ್ಥನೆಯೊಂದಿಗೆ ಈ ಪ್ರಕಟಣೆ ಹೊರಡಿಸಿದಾಗಿನಿಂದ 15 (ಹದಿನೈದು) ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಿದೆ.

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ನಗರ ಯೋಜನಾ ಇಲಾಖೆಯ ದಿನಾಂಕ:01.01.2007 ರಲ್ಲಿದ್ದಂತೆ ನಗರ ಯೋಜನಾ ಜಂಟಿ ನಿರ್ದೇಶಕರ ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು ಶ್ರೀ/ ಶ್ರೀಮತಿ | ನೇರ ನೇಮಕಾತಿ ಮುಂಬಡ್ತಿ: ಇತರೆ | ಮೀಸಲಾತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಜ್ಯೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಎಚ್.ಬಿ. ಮುಕುಂದ | ಮುಂಬಡ್ತಿ | - | 09.02.1952 | 06.01.1979 | 20.05.1999 | 20.05.1999 |
| 2. | ಎಸ್.ಎಸ್. ಟೊಪಗಿ | ಮುಂಬಡ್ತಿ | - | 28.03.1954 | 06.01.1984 | 02.08.2003 | 02.08.2003 |
| 3. | ಎಸ್.ಬಿ. ಹೊನ್ನೂರ್ | ಮುಂಬಡ್ತಿ | - | 25.07.1955 | 15.11.1983 | 19.01.2004 | 30.12.2003 |
| 4. | ಬಿ.ಎಂ. ತಿರಕನಗೌಡರ್ | ಮುಂಬಡ್ತಿ | - | 01.05.1956 | 07.11.1983 | 05.01.2004 | 30.12.2003 |
| 5. | ಎ.ವಿ. ರಂಗೇಶ್ | ಮುಂಬಡ್ತಿ | - | 06.09.1956 | 10.06.1983 | 05.01.2004 | 30.12.2003 |
| 6. | ಬಿ. ಮಹೇಂದ್ರ | ಮುಂಬಡ್ತಿ | - | 01.06.1959 | 23.04.1984 | 13.02.2004 | 13.02.2004 |
| 7. | ಕೆ.ಆರ್. ವೀರೇಂದ್ರನಾಥ್ | ಮುಂಬಡ್ತಿ | - | 08.11.1954 | 01.06.1975 | 05.05.2005 | 05.05.2005 |
| 8. | ಶ್ರೀ ಐಜಾಜ್ ಅಹಮದ್ | ಮುಂಬಡ್ತಿ | - | 09.02.1957 | 30.10.1976 | 23.03.2006 | 10.03.2006 |

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 396

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಜಲಸಂಪನ್ಮೂಲ (ಸಣ್ಣ ನೀರಾವರಿ) ಸಚಿವಾಲಯ

**ವಿಷಯ:** ಶ್ರೀ ಎ.ಎಸ್. ನಂಜಪ್ಪಗೌಡ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರು ಸಣ್ಣ ನೀರಾವರಿ ಉಪವಿಭಾಗ, ಹಾಸನ (ಪ್ರಸ್ತುತ) ಚಿಕ್ಕಮಗಳೂರು ಇಲ್ಲಿ ಕೂಲಿಗಾಗಿ ಕಾಳು ಯೋಜನೆಯಡಿಯಲ್ಲಿ ಎಸಗಿರುವ ಅವ್ಯವಹಾರದ ಬಗ್ಗೆ ಶಿಸ್ತು ಕ್ರಮ ಕೈಗೊಳ್ಳುವ ಕುರಿತು.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಸನೀಇ 23 ಸೇಇವಿ 2004 ದಿನಾಂಕ:21.07.2004.
2) ಸರ್ಕಾರದ ಆದೇಶ ಸಂಖ್ಯೆ: ಸನೀಇ 23 ಸೇಇವಿ 2004 ದಿನಾಂಕ:31.12.2004.
3) ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಸನೀಇ 23 ಸೇಇವಿ 2004, ದಿನಾಂಕ:05.09.2006.
4) ಶ್ರೀ ಎ.ಎಸ್. ನಂಜಪ್ಪಗೌಡ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರ ಲಿಖಿತ ಉತ್ತರ ದಿನಾಂಕ:09.10.2006.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಎ.ಎಸ್. ನಂಜಪ್ಪಗೌಡ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಉಪವಿಭಾಗ, ಚಿಕ್ಕಮಗಳೂರು ಇವರು ಸಣ್ಣ ನೀರಾವರಿ ಉಪವಿಭಾಗ, ಹಾಸನ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಹಾಸನ ಸಣ್ಣ ನೀರಾವರಿ ಉಪವಿಭಾಗದ ಕೂಲಿಗಾಗಿ ಕಾಳು ಯೋಜನೆಯಡಿಯಲ್ಲಿ ಮಂಜೂರಾದ 13 ಕಾಮಗಾರಿಗೆ ಸಂಬಂಧಿಸಿದಂತೆ ಹಾಸನ ಜಿಲ್ಲಾಧಿಕಾರಿಗಳು

ವಿವರಿಸಿರುವ 402.56 ಮೆಟ್ರಿಕ್ ಟನ್ ಅಕ್ಕಿಯನ್ನು ದಿನಾಂಕ:20.04.2004 ರಿಂದ 24.06.2004ರ ವರೆಗೆ ಉಗ್ರಾಣದಲ್ಲಿ ಶೇಖರಿಸಿ ಕೂಲಿಗಾಗಿ ಕಾಳು ಯೋಜನೆಯಡಿಯಲ್ಲಿ ಕಾಮಗಾರಿಯನ್ನು ತೆಗೆದುಕೊಳ್ಳದೆ ಆಹಾರ ಧಾನ್ಯವನ್ನು ಕೂಲಿಕಾರರಿಗೆ ವಿತರಣೆ ಮಾಡದೆ ದುರ್ನಡತೆ ಎಸಗಿರುವ ಹಿನ್ನಲೆಯಲ್ಲಿ ಹಾಗೂ ದಿನಾಂಕ:24.06.2006ರಂದು ಬರಪರಿಹಾರ ಯೋಜನೆಯಡಿಯಲ್ಲಿ ಹಂಚಿಕೆಯಾಗಿರುವ ಆಹಾರಧಾನ್ಯಗಳು ವಿದೇಶಕ್ಕೆ ರವಾನೆಯಾಗುತ್ತಿರುವ ಬಗ್ಗೆ ಸಿ.ಓ.ಡಿ.ಯು ತನಿಖೆ ನಡೆಸಿ ಸದರಿ ಪ್ರಕರಣದಲ್ಲಿ ಶ್ರೀಯುತರು ಕೂಡ ಭಾಗಿಯಾಗಿರುವುದಾಗಿ ಸಿ.ಓ.ಡಿ. ಪೊಲೀಸರು ಸದರಿಯವರನ್ನು ದಿನಾಂಕ:24.06.2006ರಂದು ವಿಚಾರಣೆ ನಡೆಸಿ ಕ್ರಿಮಿನಲ್ ಪ್ರಕರಣ ದಾಖಲಿಸುವ ಮೂಲಕ ನ್ಯಾಯಾಲಯದ ಮುಂದೆ ಹಾಜರುಪಡಿಸಿ ಅವರನ್ನು ನ್ಯಾಯಾಂಗ ಬಂಧನಕ್ಕೆ ಒಳಪಡಿಸಿರುವುದರಿಂದ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 10(1)(ಡಿ) ರಡಿಯಲ್ಲಿ ಅವರ ವಿರುದ್ಧದ ಶಿಸ್ತು ಕ್ರಮವನ್ನು ಬಾಕಿ ಇಟ್ಟು ಅಮಾನತ್ತುಗೊಳಿಸಿ, ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ:31.12.2004ರ ಆದೇಶದಲ್ಲಿ ಇವರ ಅಮಾನತ್ತನ್ನು ತೆರವುಗೊಳಿಸಲಾಗಿರುತ್ತದೆ.

ಈ ಮೇಲ್ಕಂಡ ದುರ್ನಡತೆಗಳ ಹಿನ್ನಲೆಯಲ್ಲಿ ಶ್ರೀಯುತರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲು ಕೆ.ಸಿ.ಎಸ್.(ಸಿ.ಸಿ.ಎ.) ನಿಯಮ 11ರಡಿಯಲ್ಲಿ ದೋಷಾರೋಪಣಾ ಪಟ್ಟಿಯನ್ನು (ಅನುಬಂಧ-1 ರಿಂದ 4) ಕಾರಣ ಕೇಳುವ ನೋಟೀಸಿನೊಂದಿಗೆ ಮೇಲೆ ಓದಲಾದ ಕ್ರಮಾಂಕ (3) ರಲ್ಲಿ ಜಾರಿಗೊಳಿಸಲಾಗಿತ್ತು. ಹಾಗೂ ಸದರಿ ದೋಷಾರೋಪಣೆಗಳಿಗೆ ರಕ್ಷಣಾ ಹೇಳಿಕೆಯನ್ನು 30 ದಿನದೊಳಗಾಗಿ ಸಲ್ಲಿಸುವಂತೆ ಆದೇಶಿಸಲಾಗಿತ್ತು.

ಶ್ರೀ ಎ.ಎಸ್. ನಂಜಪ್ಪಗೌಡ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರು ಸಲ್ಲಿಸಿರುವ ರಕ್ಷಣಾ ಹೇಳಿಕೆಯಲ್ಲಿ ಸದರಿಯವರ ವಿರುದ್ಧದ ಆರೋಪವನ್ನು ಅಲ್ಲಗಳೆದಿದ್ದು ಸಣ್ಣ ನೀರಾವರಿ ಕಾಮಗಾರಿಗಳಿಗೆ ಹಂಚಿಕೆಯಾಗಿರುವ ಆಹಾರಧಾನ್ಯವನ್ನು ಕಾಮಗಾರಿ ಮಂಜೂರಾತಿಯಾಗದ ಪ್ರಯುಕ್ತ ಹಿಂದಿರುಗಿಸಿರುವುದರಿಂದ ಯಾವುದೇ ಕರ್ತವ್ಯ ಚ್ಯುತಿ ಎಸಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಶ್ರೀಯುತರ ರಕ್ಷಣಾ ಹೇಳಿಕೆ ಹಾಗೂ ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಿದ್ದು, ಈ ಆಪಾದನೆಗಳ ಬಗ್ಗೆ ಪೂರ್ಣ ಪ್ರಮಾಣದ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 23 ಸೇಇವಿ 2004, ಬೆಂಗಳೂರು, ದಿನಾಂಕ:24ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಎ.ಎಸ್. ನಂಜಪ್ಪಗೌಡ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರು ಹಾಸನ ಸಣ್ಣ ನೀರಾವರಿ ಉಪ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಕೂಲಿಗಾಗಿ ಕಾಳು ಯೋಜನೆಯಡಿಯಲ್ಲಿ ಎಸಗಿರುವ ದುರ್ನಡತೆ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿಗಳು 1957ರ ನಿಯಮ 11ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಬಿ.ಕೆ. ಕಣವಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು, ಇಲ್ಲಿಯ ತಾಂತ್ರಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಮುಗಿಸಿ ಸರ್ಕಾರಕ್ಕೆ ವರದಿ ನೀಡುವಂತೆ ಆದೇಶಿಸಲಾಗಿದೆ. ಮತ್ತು ವಿಚಾರಣೆಯನ್ನು ಮುಗಿಸಿ ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 1996 ದಿನಾಂಕ:23.08.2005ರನ್ವಯ ನಿಗದಿಪಡಿಸಿರುವ ರೂ.6000/- ಸಂಚಿತ ಸಂಭಾವನೆ ಹಾಗೂ ರೂ.1000/-ಗಳ ವಾಹನ ಭತ್ಯೆಯನ್ನು ಪಾವತಿ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರಿಗೆ ಆದೇಶಿಸಿದೆ.

ವಿಚಾರಣಾಧಿಕಾರಿಯವರಿಗೆ ಇಲಾಖಾ ವಿಚಾರಣೆ ನಡೆಸಲು ಸ್ಥಳಾವಕಾಶ, ಲೇಖನ ಸಾಮಗ್ರಿ ಹಾಗೂ ಇತ್ಯಾದಿ ಸೌಲಭ್ಯಗಳನ್ನು ಒದಗಿಸುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು, ಇವರಿಗೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 398

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಹಕಾರ ಸಚಿವಾಲಯ

**ವಿಷಯ:** ಕೋಲಾರ ಡಿ.ಸಿ.ಸಿ. ಬ್ಯಾಂಕ್ ನಿ., ಕೋಲಾರ ಇದರ ವಿಶೇಷಾಧಿಕಾರಿ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 349, ಸಿಎಲ್ಎಂ 2005 ದಿನಾಂಕ:18.03.2006.
2) ಸರ್ಕಾರದ ಆದೇಶ ಸಂಖ್ಯೆ: ಸಿಒ 175 ಸಿಎಲ್ಎಂ 2006 ದಿನಾಂಕ:08.09.2006.
3) ವ್ಯವಸ್ಥಾಪಕ ನಿರ್ದೇಶಕರು ಕೋಲಾರ ಡಿಸಿಸಿ ಬ್ಯಾಂಕ್ ರವರ ಪತ್ರದ ಸಂಖ್ಯೆ: ಯೋ ಮತ್ತು ಅ 9743-46/ 2006-07 ದಿನಾಂಕ:02.01.2007.
4) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/ ಸಿಎಬಿ/ 81/ 2003-04 ದಿನಾಂಕ:14.02.2007.

**ಪ್ರಸ್ತಾವನೆ:**

ಕೋಲಾರ ಡಿ.ಸಿ.ಸಿ. ಬ್ಯಾಂಕಿನ ಆಡಳಿತ ಮಂಡಳಿಯಲ್ಲಿ ಶೂನ್ಯ ಸ್ಥಿತಿ ಉದ್ಭವಿಸಿದ್ದರಿಂದ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 31(1)ರ ಪ್ರಕಾರ ಕೋಲಾರ ಜಿಲ್ಲಾಧಿಕಾರಿಯವರನ್ನು ಬ್ಯಾಂಕಿನ ವಿಶೇಷಾಧಿಕಾರಿಯನ್ನಾಗಿ ದಿನಾಂಕ:21.08.2004ರಂದು ನೇಮಿಸಿದ್ದು ಕಾಲಕಾಲಕ್ಕೆ ಸದರಿ ಅವಧಿಯನ್ನು ವಿಸ್ತರಿಸಿ ಮೇಲೆ ಓದಲಾದ (2)ರ ಆದೇಶದಲ್ಲಿ ಸದರಿ ಅವಧಿಯನ್ನು ದಿನಾಂಕ:20.08.2006 ರಿಂದ 19.02.2007ರವರೆಗೆ ವಿಸ್ತರಿಸಲಾಗಿರುತ್ತದೆ. ಮೆಲೆ ಓದಲಾದ (3)ರ ಪತ್ರದಲ್ಲಿ ಕೋಲಾರ ಡಿಸಿಸಿ ಬ್ಯಾಂಕಿಗೆ ವಿಶೇಷಾಧಿಕಾರಿಯ ನೇಮಕದ ನಂತರ ದೀರ್ಘಕಾಲದಿಂದ ಉಂಟಾಗಿದ್ದ ಸಿಆರ್‌ಆರ್ ಮತ್ತು ಎಸ್‌ಎಲ್‌ಆರ್ ಕೊರತೆಯನ್ನು ಸರಿದೂಗಿಸಿ ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ 1949ರ ಪ್ರಕರಣ 18 ಮತ್ತು 24ಗಳನ್ನು ಕ್ರಮಬದ್ಧವಾಗಿ ನಿರ್ವಹಿಸಲಾಗುತ್ತಿದೆ ಎಂದೂ 2005-06ನೇ ಸಾಲಿಗೆ ವಸೂಲಾತಿ ಪ್ರಮಾಣ ಶೇಕಡಾ 17.09ರಷ್ಟು ಆಗಿರುತ್ತದೆಂದೂ ಬ್ಯಾಂಕಿನ ನೆಟ್‌ವರ್ತ್ ಸ್ಥಿತಿ ದಿನಾಂಕ:30.09.2006ಕ್ಕೆ ರೂ. (-) 1183.71 ಲಕ್ಷಗಳಿದ್ದು ಇದನ್ನು ಸಂಪೂರ್ಣ ಹೋಗಲಾಡಿಸಬೇಕಾಗಿರುತ್ತದೆಂದೂ ಬ್ಯಾಂಕಿನ ಸಾಲ ವಸೂಲಾತಿಯಲ್ಲಿ ಇನ್ನೂ ಹೆಚ್ಚಿನ ಪ್ರಗತಿಯನ್ನು ಸಾಧಿಸಬೇಕಾಗಿದ್ದು, ಅಪೆಕ್ಸ್ ಬ್ಯಾಂಕಿಗೆ ಸುಸ್ತಿಯಿರುವ ರೂ.4805.18 ಲಕ್ಷಗಳನ್ನು ಮರುಪಾವತಿಸಬೇಕಿರುತ್ತದೆಂದೂ ತಿಳಿಸಿ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ:20.02.2007ರಿಂದ 6

ತಿಂಗಳವರೆಗೆ ವಿಸ್ತರಿಸುವಂತೆ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಕೋರಿರುತ್ತಾರೆ. ಮೇಲೆ ಓದಲಾದ (4)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಬ್ಯಾಂಕಿನ ವಿಶೇಷಾಧಿಕಾರಿಯ ಅವಧಿಯನ್ನು ದಿನಾಂಕ:20.02.2007 ರಿಂದ 6 ತಿಂಗಳವರೆಗೆ ವಿಸ್ತರಿಸಲು ಶಿಫಾರಸು ಮಾಡಿದ್ದಾರೆ. ಬ್ಯಾಂಕಿನ ಸದ್ಯದ ಆರ್ಥಿಕ ಪರಿಸ್ಥಿತಿಯನ್ನು ಮತ್ತು ಪ್ರಾಥಮಿಕ ಕೃಷಿಪತ್ತಿನ ಸಹಕಾರ ಸಂಘಗಳ ವಸೂಲಾತಿ ಪ್ರಮಾಣವನ್ನು ಪರಿಗಣಿಸಿದರೆ ವಿಶೇಷಾಧಿಕಾರಿಯ ಅವಧಿಯನ್ನು ಮಾರ್ಚ್ 2008ರವರೆಗೆ ಮುಂದುವರೆಸುವುದು ಅಗತ್ಯವೆಂದು ಕಂಡುಬರುತ್ತದೆ.

ಆದ್ದರಿಂದ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 19 ಸಿಎಲ್‌ಎಮ್ 2007, ಬೆಂಗಳೂರು, ದಿನಾಂಕ:20ನೇ ಫೆಬ್ರವರಿ, 2007**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 31(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ, ಕೋಲಾರ ಡಿ.ಸಿ.ಸಿ. ಬ್ಯಾಂಕ್ ನಿ., ಕೋಲಾರ ಇದಕ್ಕೆ ಅನ್ವಯವಾಗತಕ್ಕದೆಂದು ನಿರ್ದೇಶಿಸುತ್ತದೆ ಎಂದರೆ;

"31ರ ಪ್ರಕರಣದಲ್ಲಿ,

(1) ನೇ ಉಪ ಪ್ರಕರಣದಲ್ಲಿರುವ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಮೂವತ್ತೆಂಟು, ತಿಂಗಳು" ಎಂಬುದಾಗಿ ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 31 (1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:31.03.2008 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 31(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 406

ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಶಿವಮೊಗ್ಗ ನಗರದಲ್ಲಿ ಪ್ರಥಮ ದರ್ಜೆ ಕಾಲೇಜು ನಿರ್ಮಿಸಲು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಹಿಂಭಾಗದಲ್ಲಿರುವ ಶಿಕ್ಷಣ ಇಲಾಖೆಗೆ ಸೇರಿದ ಜಾಗವನ್ನು ಕಾಲೇಜು ಶಿಕ್ಷಣ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರಸಂಖ್ಯೆ: ಯೋ(ಕ2) ಶಿ, ಸ.ಪ್ರ.ಕಾ.ನಿ.34/2006-07, ದಿನಾಂಕ:16.01.2007.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರದಲ್ಲಿ ಶಿವಮೊಗ್ಗ ನಗರದ ಬಿ.ಎಚ್. ರಸ್ತೆಯಲ್ಲಿರುವ ಸರ್ಕಾರಿ ಪ್ರೌಢಶಾಲಾ ವಿಭಾಗದ ನಿವೇಶನವನ್ನು ಪ್ರಥಮ ದರ್ಜೆ ಕಾಲೇಜಿಗೆ ಕಟ್ಟಡಕ್ಕಾಗಿ ಕಾಲೇಜು ಶಿಕ್ಷಣ ಆಯುಕ್ತರು ಮತ್ತು ಪ್ರಾಂಶುಪಾಲರು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಶಿವಮೊಗ್ಗ ರವರು ಕೋರಿರುವುದಾಗಿ ತಿಳಿಸಿ, ಸದರಿ ಪ್ರೌಢಶಾಲಾ ವಿಭಾಗವು 4 ಎಕರೆ 32 ಗುಂಟೆ ವಿಸ್ತೀರ್ಣ ಹೊಂದಿದ್ದು, ಪ್ರೌಢಶಾಲಾ ಹಿಂಭಾಗದಲ್ಲಿ 2.05 ಎಕರೆ ಖಾಲಿ ನಿವೇಶನ ಇರುತ್ತದೆ. ಈ ಉಳಿಕೆ ಜಾಗದಲ್ಲಿ 100x300 ಚದರ ಅಡಿ ವಿಸ್ತೀರ್ಣದ ಜಾಗವನ್ನು ಪ್ರಥಮ ದರ್ಜೆ ಕಾಲೇಜಿಗೆ ಕಟ್ಟಡ ನಿರ್ಮಾಣಕ್ಕಾಗಿ ಪ್ರಾಂಶುಪಾಲರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಾಲೇಜು ಶಿಕ್ಷಣ ಇಲಾಖೆ, ಇವರಿಗೆ ಹಸ್ತಾಂತರಿಸಲು ಸರ್ಕಾರದ ಆದೇಶವನ್ನು ನೀಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 85 ಯೋಸಕಾ 2007, ಬೆಂಗಳೂರು, ದಿನಾಂಕ:26ನೇ ಫೆಬ್ರವರಿ, 2007**

**[ಇಡಿ:21: ಸ್ವೀಮರ (ಯುನಿಕ್) 2007 ದಿನಾಂಕ:26.02.2007]**

ಶಿವಮೊಗ್ಗ ನಗರದ ಬಿ.ಎಚ್. ರಸ್ತೆಯಲ್ಲಿರುವ ಸರ್ಕಾರಿ ಪ್ರೌಢಶಾಲಾ ವಿಭಾಗದ 100x300 ಚದರ ಅಡಿ ವಿಸ್ತೀರ್ಣದ ಜಾಗವನ್ನು ಶಿವಮೊಗ್ಗ ನಗರದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಕಟ್ಟಡ ನಿರ್ಮಾಣಕ್ಕಾಗಿ ಪ್ರಾಂಶುಪಾಲರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಾಲೇಜು ಶಿಕ್ಷಣ ಇಲಾಖೆ, ಇವರಿಗೆ ನಿಯಮಾನುಸಾರ ಹಸ್ತಾಂತರಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 407

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ನೀರಾವರಿ ಇಲಾಖೆಯಲ್ಲಿ ಸೃಜಿಸಲಾಗಿರುವ ಕೃಷ್ಣಾ ಭಾಗ್ಯ ಜಲನಿಗಮದ ವಿಶೇಷ ಕೋಶವನ್ನು ಅದರ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 94, ದಿನಾಂಕ:07.07.1994.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 99, ದಿನಾಂಕ:22.10.1999.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಸಸಿವಿ 2006, ದಿನಾಂಕ:25.02.2006.
4. ನೀರಾವರಿ ಇಲಾಖೆಯ ಕಡತ ಸಂಖ್ಯೆ: ಜಸಂಇ 10 ಕೆಬಿಎನ್ 2007.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ: (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕೃಷ್ಣಾ ಭಾಗ್ಯ ಜಲನಿಗಮದ ಪ್ರಾರಂಭಿಕ ಕಾರ್ಯಗಳನ್ನು ನಿರ್ವಹಿಸಲು ಕರ್ನಾಟಕ ಸರ್ಕಾರ ಸಚಿವಾಲಯದ ನೀರಾವರಿ ಇಲಾಖೆಯಲ್ಲಿ ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ ಕೃಷ್ಣಾ ಭಾಗ್ಯ ಜಲನಿಗಮದ ವಿಶೇಷ ಕೋಶ ಒಂದನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1. | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ | 1 ಹುದ್ದೆ |
| 2. | ಅಧೀನ ಕಾರ್ಯದರ್ಶಿ | 1 ಹುದ್ದೆ |
| 3. | ಶಾಖಾಧಿಕಾರಿ | 1 ಹುದ್ದೆ |
| 4. | ಹಿರಿಯ ಸಹಾಯಕರು | 2 ಹುದ್ದೆ |
| 5. | ಸಹಾಯಕರು | 1 ಹುದ್ದೆ |
| 6. | ಕಿರಿಯ ಸಹಾಯಕರ | 1 ಹುದ್ದೆ |
| 7. | ಬೆರಳಚ್ಚುಗಾರರು | 1 ಹುದ್ದೆ |
| 8. | ಶೀಘ್ರಲಿಪಿಗಾರರು | 1 ಹುದ್ದೆ |
| 9. | ದಲಾಯತ್ | 1 ಹುದ್ದೆ |

ಮೇಲೆ ಕ್ರಮಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ, ನೀರಾವರಿ ಇಲಾಖೆ (ಕೃಷ್ಣಾ ಭಾಗ್ಯ ಜಲನಿಗಮ ವಿಶೇಷ ಕೋಶ) ಇವರ ಆಪ್ತ ಶಾಖೆಗೆ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| 1. | ಶೀಘ್ರಲಿಪಿಗಾರರು | 1 ಹುದ್ದೆ |
| 2. | ಕಿರಿಯ ಸಹಾಯಕರು | 1 ಹುದ್ದೆ |
| 3. | ಗ್ರೂಪ್ 'ಡಿ' | 1 ಹುದ್ದೆ |

ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ಕ್ರಮಸಂಖ್ಯೆ (3)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ದಿನಾಂಕ:31.03.2007ರವರೆಗೆ ಮುಂದುವರೆಸಲಾಗಿದೆ.

ಮೇಲ್ಕಂಡ ಹುದ್ದೆಯ ಅವಧಿಯು ದಿನಾಂಕ:31.03.2007ಕ್ಕೆ ಅಂತ್ಯಗೊಂಡಿರುವುದರಿಂದ ಈ ಹುದ್ದೆಗಳನ್ನು ದಿನಾಂಕ:01.04.2007 ರಿಂದ 31.03.2008 ರವರೆಗೆ ಮುಂದುವರೆಸುವಂತೆ ಕೋರಿ ಜಲಸಂಪನ್ಮೂಲ ಇಲಾಖೆಯ ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಕಡತದಲ್ಲಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 9 ಸಸಿವಿ 2007, ಬೆಂಗಳೂರು, ದಿನಾಂಕ:2ನೇ ಮಾರ್ಚ್, 2007**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಕೃಷ್ಣಾ ಭಾಗ್ಯ ಜಲನಿಗಮದ ವಿಶೇಷ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ:01.04.2007 ರಿಂದ 31.03.2008 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1. | ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ | 1 ಹುದ್ದೆ |
| 2. | ಅಧೀನ ಕಾರ್ಯದರ್ಶಿ | 1 ಹುದ್ದೆ |
| 3. | ಶಾಖಾಧಿಕಾರಿ | 1 ಹುದ್ದೆ |
| 4. | ಹಿರಿಯ ಸಹಾಯಕರು | 2 ಹುದ್ದೆ |
| 5. | ಸಹಾಯಕರು | 1 ಹುದ್ದೆ |
| 6. | ಕಿರಿಯ ಸಹಾಯಕರ | 1 ಹುದ್ದೆ |
| 7. | ಬೆರಳಚ್ಚುಗಾರರು | 1 ಹುದ್ದೆ |
| 8. | ಶೀಘ್ರಲಿಪಿಗಾರರು | 1 ಹುದ್ದೆ |
| 9. | ದಲಾಯತ್ | 1 ಹುದ್ದೆ |

| ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿಯವರ ಆಪ್ತ ಶಾಖೆ. | | |
|---|---|---|
| 1. | ಶೀಘ್ರಲಿಪಿಗಾರರು | 1 ಹುದ್ದೆ |
| 2. | ಕಿರಿಯ ಸಹಾಯಕರು | 1 ಹುದ್ದೆ |
| 3. | ಗ್ರೂಪ್ 'ಡಿ' | 1 ಹುದ್ದೆ |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 409

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ವಿಷಯ:** ಹೊಸದಾಗಿ ಸೃಜಿಸಲಾದ ಜಿಲ್ಲೆಗಳಲ್ಲಿ ಕರ್ನಾಟಕ ಲೋಕಾಯುಕ್ತ ಕಛೇರಿಗಳಿಗೆ ಮಂಜೂರಾಗಿರುವ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 73 ಸೇಲೋಯು 1999, ದಿನಾಂಕ:29.05.2000.

2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 109 ಸೇಲೋಯು 2002, ದಿನಾಂಕ:28.12.2002.

3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 84 ಸೇಲೋಯು 2003, ದಿನಾಂಕ:13.08.2003.

4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 26 ಸೇಲೋಯು 2004, ದಿನಾಂಕ:15.03.2004.

5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 66 ಸೇಲೋಯು 2005, ದಿನಾಂಕ:13.06.2005

6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 66 ಸೇಲೋಯು 2005, ದಿನಾಂಕ:25.09.2006.

**ಪ್ರಸ್ತಾವನೆ:**

ರಾಜ್ಯ ಸರ್ಕಾರವು ಹೊಸದಾಗಿ ಸೃಜಿಸಿದ ಏಳು (07) ಜಿಲ್ಲೆಗಳ ಪೈಕಿ ಬಾಗಲಕೋಟೆ ಮತ್ತು ಕೊಪ್ಪಳ ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ ಚಾಮರಾಜನಗರ, ಗದಗ, ಹಾವೇರಿ, ಉಡುಪಿ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿ ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ಕಛೇರಿಗಳನ್ನು ತೆರೆದು, ಸದರಿ ಕಛೇರಿಗಳಿಗೆ ಒಟ್ಟು 55 ವಿವಿಧ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಸೃಜಿಸಲು ಮೇಲೆ (1) ರಲ್ಲಿ ಓದಲಾದ ದಿನಾಂಕ:29.05.2000ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. ತದನಂತರ ಈ ಹುದ್ದೆಗಳನ್ನು ಮುಂದುವರೆಸುವ ಅಗತ್ಯವಿದ್ದುದರಿಂದ ಮೇಲೆ ಓದಲಾದ (2) ರಿಂದ (6) ರ ಸರ್ಕಾರಿ ಆದೇಶಗಳಲ್ಲಿ ವರ್ಷದಿಂದ ವರ್ಷಕ್ಕೆ ತಾತ್ಕಾಲಿಕವಾಗಿ ಮುಂದುವರಿಸಿಕೊಂಡು ಬರಲಾಗುತ್ತಿದ್ದು, ಈ ಅವಧಿಯ ದಿನಾಂಕ:29.05.2007ಕ್ಕೆ ಪೂರ್ಣಗೊಳ್ಳುತ್ತದೆ. ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ಕೆಲಸ ಕಾರ್ಯಗಳ ವ್ಯಾಪ್ತಿಯನ್ನು ಪರಿಗಣಿಸಿ ಈ ಹೊಸ ಜಿಲ್ಲೆಗಳಲ್ಲಿ ತೆರೆದಿರುವ ಲೋಕಾಯುಕ್ತ ಕಛೇರಿಗಳನ್ನು ಮುಂದುವರಿಸುವ ಅವಶ್ಯಕತೆ ಇರುವುದರಿಂದ ಹಾಗೂ ಈ ಕಛೇರಿಗಳಲ್ಲಿನ ಹುದ್ದೆಗಳನ್ನು ಈಗಾಗಲೇ ತಾತ್ಕಾಲಿಕವಾಗಿ 5 ವರ್ಷಗಳ ನಂತರವೂ ಮುಂದುವರೆಸಿರುವುದರಿಂದ ಸದರಿ 55 ಹುದ್ದೆಗಳನ್ನು ಖಾಯಂ ಆಗಿ ಮುಂದುವರಿಸುವ ಅವಶ್ಯಕತೆ ಇರುತ್ತದೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶದ ಸಂಖ್ಯೆ: ಸಿಆಸುಇ 66 ಸೇಲೋಯು 2005, ಬೆಂಗಳೂರು, ದಿನಾಂಕ:3ನೇ ಮಾರ್ಚ್, 2007**

ಚಾಮರಾಜನಗರ, ಗದಗ, ಹಾವೇರಿ, ಉಡುಪಿ ಮತ್ತು ದಾವಣಗೆರೆ ಜಿಲ್ಲೆಗಳಲ್ಲಿನ ಕರ್ನಾಟಕ ಲೋಕಾಯುಕ್ತ ಕಛೇರಿಗಳಲ್ಲಿ ದಿನಾಂಕ:29.05.2000ರ ಆದೇಶ ಸಂಖ್ಯೆ: ಸಿಆಸುಇ 73 ಸೇಲೋಯು 99ರಲ್ಲಿ ಸೃಜಿಸಿರುವ 55 ವಿವಿಧ ಹುದ್ದೆಗಳನ್ನು ಖಾಯಂ ಆಗಿ ಮುಂದುವರೆಸಲು ಮಂಜೂರಾತಿ ನೀಡಿದೆ.

ಈ ಹುದ್ದೆಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 80 ವೆಚ್ಚ/ 5/ 2007ರ ದಿನಾಂಕ:05.02.2007 ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-2)

**ಸರ್ಕಾರಿ ಆದೇಶದ ಸಂಖ್ಯೆ: ಸಿಆಸುಇ 66 ಸೇಲೋಯು 2005, ಬೆಂಗಳೂರು, ದಿನಾಂಕ:03.03.2007**

**ಅನುಬಂಧ**

| ಕ್ರಮ ಸಂಖ್ಯೆ | ಜಿಲ್ಲೆ | ಪದನಾಮ | | | | | | | |
|---|---|---|---|---|---|---|---|---|---|
| | | ಪೊಲೀಸ್ ಇನ್ಸ್‌ಪೆಕ್ಟರ್ (ಪೊ.ಇ.) | ಕ್ಲರ್ಕ್ ಕಂ ಟೈಪಿಸ್ಟ್ | ಮುಖ್ಯಪೇದೆ (ಪ್ರತಿ ಕಛೇರಿಗೆ) | ಪೇದೆ (ಸಿವಿಲ್) (ಪ್ರತಿ ಕಛೇರಿಗೆ) | ಎಪಿಸಿ (ಆರ್ಡರ್ಲಿ) (ಪ್ರತಿ ಪೊ.ಇ.ಗೆ) | ಎಪಿಸಿ (ಡ್ರೈವರ್) (ಪ್ರತಿ ಕಛೇರಿಗೆ) | ದಲಾಯತ್ (ಪ್ರತಿ ಪೊ.ಇ.ಗೆ) | ಒಟ್ಟು |
| ವೇತನ ಶ್ರೇಣಿ (ರೂ.) | | 5575-10620 | 3000-5450 | 3300-8300 | 3000-5450 | 3000-5450 | 3000-5450 | 2500-3850 | |
| 1. | ಚಾಮರಾಜನಗರ | 1 | 1 | 4 | 2 | 1 | 1 | 1 | 11 |
| 2. | ಗದಗ | 1 | 1 | 4 | 2 | 1 | 1 | 1 | 11 |
| 3. | ಹಾವೇರಿ | 1 | 1 | 4 | 2 | 1 | 1 | 1 | 11 |
| 4. | ಉಡುಪಿ | 1 | 1 | 4 | 2 | 1 | 1 | 1 | 11 |
| 5. | ದಾವಣಗೆರೆ | 1 | 1 | 4 | 2 | 1 | 1 | 1 | 11 |
| | **ಒಟ್ಟು** | **5** | **5** | **20** | **10** | **5** | **5** | **5** | **55** |

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-2)

ಪಿ.ಆರ್. 410

## ಶಿಕ್ಷಣ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಇಡಿ 108 ಟಿವಿಇ 2005, ಬೆಂಗಳೂರು, ದಿನಾಂಕ:27ನೇ ಫೆಬ್ರವರಿ, 2007**

ದಿನಾಂಕ:18.02.1995ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 8 ಡಿಜಿಡಿ 95ರ ಆದೇಶ ಭಾಗದ 8ನೇ ಸಾಲಿನಲ್ಲಿರುವ "ಸೂಪರ್ ನ್ಯೂಮರರಿ" ಎಂಬ ಪದವನ್ನು "ತಾತ್ಕಾಲಿಕ" ಎಂಬ ಪದದಿಂದ ಅದನ್ನು ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ, ಈ ಮೂಲಕ ಪ್ರತಿಸ್ಥಾಪಿಸಲಾಗಿದೆ (substituted).

ಆರ್ಥಿಕ ಇಲಾಖೆ ಅದರ ದಿನಾಂಕ:15.02.2007ರ ಟಿಪ್ಪಣಿ ಸಂಖ್ಯೆ: ಎಫ್‌ಡಿ/ 4/ ಸೇ-2/ 2007ರನ್ವಯ ನೀಡಿದ ಸಹಮತಿಯಂತೆ ಈ ತಿದ್ದೋಲೆಯನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

ಪಿ.ಆರ್. 429

## ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಲ್ಲಿ ಶೇ.80ರಷ್ಟು ಖಾಲಿ ಇರುವ ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:01.03.2005, 16.04.2005 ಹಾಗೂ 13.06.2005ರಂದು ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಿಯುತ ಸಮಿತಿ ಸಭಾ ನಡವಳಿ.
2. ಸರ್ಕಾರದ ಆದೇಶ ಸಂಖ್ಯೆ: ಪಿಡಿ 138 ಎಸ್‌ಎಂಸಿ 2003, ದಿನಾಂಕ:07.07.2006.
3. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ:14.02.2007ರಂದು ನಡೆದ ಅಧಿಕಾರಿಯುತ ಸಮಿತಿ ಸಭಾ ನಡವಳಿ.

**ಪ್ರಸ್ತಾವನೆ:**

ದಿನಾಂಕ: 01.04.2000ರಂದು ಖಾಲಿ ಇದ್ದ ಸರ್ಕಾರದ ಹುದ್ದೆಗಳಲ್ಲಿ ಶೇ.80ರಷ್ಟು ಹುದ್ದೆಗಳನ್ನು ರದ್ದುಪಡಿಸುವ ಅಂಗವಾಗಿ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಆಡಳಿತಾತ್ಮಕ ವ್ಯಾಪ್ತಿಗೆ ಒಳಪಡುವ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾದ (1)ರ ದಿನಾಂಕ:01.03.2005, 16.04.2005 ಹಾಗೂ 13.06.2005ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಇವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಿಯುತ ಸಮಿತಿ ಸಭಾ ನಡವಳಿಯಲ್ಲಿ ದಿನಾಂಕ:01.04.2000ರಂದು ಖಾಲಿ ಇದ್ದ 9 ವಾಹನ ಚಾಲಕರು ಹಾಗೂ 7 ಗುಂಪು-ಡಿ ವೃಂದದ ಹುದ್ದೆಗಳನ್ನು ರದ್ದುಪಡಿಸಲು ಗುರುತಿಸಿದ್ದು, ಈ ಹುದ್ದೆಗಳನ್ನು ಮೇಲೆ ಓದಲಾದ (2)ರ ದಿನಾಂಕ:07.07.2006ರ ಆದೇಶದಲ್ಲಿ 7 ವಾಹನ ಚಾಲಕರ ಹುದ್ದೆ ಹಾಗೂ 5 ಗುಂಪು-ಡಿ ವೃಂದದ ಹುದ್ದೆಗಳನ್ನು ರದ್ದುಪಡಿಸಿ, ತಲಾ ಎರಡು ಹುದ್ದೆಗಳನ್ನು ಇಲಾಖೆಗೆ ಅತ್ಯಾವಶ್ಯಕವಾಗಿರುವುದರಿಂದ ರದ್ದುಪಡಿಸುವಿಕೆಯಿಂದ ಉಳಿಸಿಕೊಳ್ಳಲಾಗಿದ್ದು, ಈ ತಲಾ ಎರಡು ಹುದ್ದೆಗಳನ್ನು ಉಳಿಸಿಕೊಳ್ಳಲು ವಿನಾಯ್ತಿ ಕೋರಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಅಧಿಕಾರಿಯುತ ಸಮಿತಿ ಮುಂದೆ ಪ್ರಸ್ತಾವನೆಯನ್ನು ಪುನರ್ ಪರಿಶೀಲಿಸುವಂತೆ ಕೋರಲಾಗಿದ್ದು, ಮೇಲೆ ಓದಲಾದ (3)ರಲ್ಲಿನ ಸಭಾ ನಡವಳಿಯಲ್ಲಿ ಇಲಾಖೆಯ ಕೋರಿಕೆಯಂತೆ ಪ್ರಸ್ತಾವನೆಯನ್ನು ಪುನರ್ ಪರಿಶೀಲಿಸಿ ಅಧಿಕಾರಿಯುತ ಸಮಿತಿಯು ವಿಸ್ತೃತವಾಗಿ ಚರ್ಚಿಸಿದ ನಂತರ ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯು ಉಳಿಸಿಕೊಳ್ಳು ನಿರ್ಧರಿಸಿರುವ ಎರಡು ವಾಹನ ಚಾಲಕರ ಹುದ್ದೆಗಳಲ್ಲಿ ಒಂದು ವಾಹನ ಚಾಲಕರ ಹುದ್ದೆಯನ್ನು ಹಾಗೂ ಎರಡು ಗ್ರೂಪ್-ಡಿ ಹುದ್ದೆಗಳಲ್ಲಿ ಒಂದು ಗ್ರೂಪ್-ಡಿ ನೌಕರರ ಹುದ್ದೆಯನ್ನು ರದ್ದುಪಡಿಸಲು ಸಮಿತಿಯು ತೀರ್ಮಾನಿಸಿದ್ದು ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಿಡಿ 138/ ಎಸ್.ಎಂ.ಸಿ./ 2003, ಬೆಂಗಳೂರು, ದಿನಾಂಕ:7ನೇ ಮಾರ್ಚ್, 2007**

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಸರ್ಕಾರದ ಹುದ್ದೆಗಳಲ್ಲಿ 01.04.2000ರಂದು ಖಾಲಿ ಇದ್ದ ಹುದ್ದೆಗಳಲ್ಲಿ ಶೇ.80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಪಡಿಸುವ ಸಂಬಂಧ 9 ವಾಹನ ವಾಚಲಕರ ಹುದ್ದೆ ಹಾಗೂ 7 ಗುಂಪು-ಡಿ ವರ್ಗದ ಹುದ್ದೆಗಳನ್ನು ಗುರುತಿಸಿದ್ದು, ಅವುಗಳಲ್ಲಿ 7 ವಾಹನ ಚಾಲಕರ ಹುದ್ದೆ ಹಾಗೂ 5 ಗುಂಪು-ಡಿ ವರ್ಗದ ಹುದ್ದೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ಪಿಡಿ 138/ ಎಸ್.ಎಂ.ಸಿ./2003, ದಿನಾಂಕ:07.07.2006ರಲ್ಲಿ ರದ್ದುಪಡಿಸಿದ್ದು, ಇಲಾಖೆಗೆ ಅತ್ಯಾವಶ್ಯಕವಾಗಿರುವುದರಿಂದ ಎರಡು ವಾಹನ ಚಾಲಕರ ಹುದ್ದೆ ಹಾಗೂ ಎರಡು ಗುಂಪು-ಡಿ ಹುದ್ದೆಗಳನ್ನು ಉಳಿಸಿಕೊಂಡಿದ್ದು, ಈ ಹುದ್ದೆಗಳಲ್ಲಿ ಒಂದು ವಾಹನ ಚಾಲಕರ ಹುದ್ದೆ ಹಾಗು ಒಂದು ಗ್ರೂಪ್-ಡಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿತವಾಗಿರುವ ಅಧಿಕಾರಿಯುತ ಸಮಿತಿ ಸಭೆ ದಿನಾಂಕ:14.02.2007ರ ನಡವಳಿಗಳನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಚಿನ್ನರಾಜು**
ಪೀಠಾಧಿಕಾರಿ, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್. 432

## ಆರ್ಥಿಕ ಸಚಿವಾಲಯ

**ವಿಷಯ:** ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವ ಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆಇ 165 ಸಿಎಸ್‌ಒ 94 ದಿನಾಂಕ:12.12.1994.
2. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 199 ಸಿಎಸ್‌ಎಲ್ 2004 ದಿನಾಂಕ:07.09.2004.
3. ಸರ್ಕಾರಿ ಆದೇಶ ಸಂಖ್ಯೆ: ಆಇ 388 ಸಿಎಸ್‌ಎಲ್ 2005 ದಿನಾಂಕ:30.08.2005.
4. ವಾಣಿಜ್ಯ ತೆರಿಗೆ ಆಯುಕ್ತರ ಪತ್ರಸಂಖ್ಯೆ: ಡಿಸಿಸಿಟಿ (ಹೆಚ್‌ಕ್ಯೂ-1) ಐಎನ್‌ಡಬ್ಲ್ಯೂ/ ಆರ್‌ಇಡಬ್ಲ್ಯೂ/ ಸಿ.ಆರ್.16/ 95-96 ದಿನಾಂಕ:11.09.2006.

**ಪ್ರಸ್ತಾವನೆ:**

ಮೇಲೆ 1ರಲ್ಲಿ ಓದಲಾದ ಆದೇಶ ದಿನಾಂಕ:12.12.1994ರಲ್ಲಿ ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡಿದವರಿಗೆ ಪುರಸ್ಕಾರ ನೀಡುವುದಕ್ಕೆ ಸಂಬಂಧಿಸಿದಂತೆ ಚಾಲ್ತಿಯಲ್ಲಿದ್ದ ಯೋಜನೆಯನ್ನು ಕೆಲವೊಂದು ಷರತ್ತುಗಳಿಗೊಳಪಡಿಸಿ ಮುಂದುವರೆಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಆದೇಶ ದಿನಾಂಕ:07.09.2004ರಲ್ಲಿ ಈ ಯೋಜನೆಯನ್ನು ಮುಂದುವರೆಸುತ್ತಾ ದಿನಾಂಕ:12.12.1994ರ ಆದೇಶದಲ್ಲಿ ನಮೂದಿಸಿರುವ ವಿಧಾನ ಮತ್ತು ಷರತ್ತಿಗೊಳಪಟ್ಟು ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವುದಕ್ಕೆ ದಿನಾಂಕ:01.04.2004 ರಿಂದ ದಿನಾಂಕ:31.03.2005ರ ವರೆಗೆ ಅವಧಿ ವಿಸ್ತರಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಆದೇಶ ದಿನಾಂಕ: 30.08.2005ರಲ್ಲಿ ಈ ಯೋಜನೆಯನ್ನು ದಿನಾಂಕ:01.04.2005 ರಿಂದ ದಿನಾಂಕ:31.03.2006ರ ವರೆಗೆ ವಿಸ್ತರಿಸಿ ಆದೇಶ ಹೊರಡಿಸಿದೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ವಾಣಿಜ್ಯ ಇಲಾಖೆಯ ತೆರಿಗೆ ಆಯುಕ್ತರು ಪ್ರಸ್ತಾವನೆ ಸಲ್ಲಿಸಿ ಮೌಲ್ಯವರ್ಧಿತ ತೆರಿಗೆ ಕಾಯ್ದೆ ಅಡಿಯಲ್ಲಿ 2005-06ನೇ ಸಾಲಿನಲ್ಲಿ ತೆರಿಗೆ ತಪ್ಪಿಸುವವರ ಬಗ್ಗೆ ಮಾಹಿತಿ ನೀಡಿದವರಿಗೆ ನಗದು ಪುರಸ್ಕಾರಗಳನ್ನು ವಿತರಿಸಲಾಗಿದೆ ಹಾಗೂ ಈ ಯೋಜನೆಯು ದಿನಾಂಕ:31.03.2006ರಂದು ಮುಕ್ತಾಯವಾಗಿದ್ದು, ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರನ್ನು ಪ್ರೋತ್ಸಾಹಿಸಲು ಈ ಯೋಜನೆಯನ್ನು ಮುಂದುವರಿಸುವುದು ಅಗತ್ಯವಾಗಿರುತ್ತದೆ ಮತ್ತು ಅದರಂತೆ ದಿನಾಂಕ:01.04.2006 ರಿಂದ ದಿನಾಂಕ:31.03.2007ರ ವರೆಗೆ ವಿಸ್ತರಿಸುವ ಆದೇಶವನ್ನು ಹೊರಡಿಸುವಂತೆ ಶಿಫಾರಸ್ಸು ಮಾಡಿದ್ದಾರೆ.

ವಾಣಿಜ್ಯ ತೆರಿಗೆ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 419 ಸಿಎಸ್ಎಲ್ 2006, ಬೆಂಗಳೂರು, ದಿನಾಂಕ:7ನೇ ಮಾರ್ಚ್, 2007**

ಸರ್ಕಾರಿ ಆದೇಶ ಸಂಖ್ಯೆ: ಆಇ 165 ಸಿಎಸ್ಒ 94, ದಿನಾಂಕ:12.12.1994ರಲ್ಲಿ ನಮೂದಿಸಲಾದ ವಿಧಾನ ಮತ್ತು ಷರತ್ತುಗಳಿಗೊಳಪಟ್ಟು ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವುದಕ್ಕೆ ಸಂಬಂಧಪಟ್ಟ ಯೋಜನೆಯನ್ನು ದಿನಾಂಕ:01.04.2006 ರಿಂದ ದಿನಾಂಕ:31.03.2007ರ ವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಇಟಗಿ**
ಪಿ.ಆರ್. 434
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-1).

## INFRASTRUCTURE DEVELOPMENT SECRETARIAT

**Sub:** Sharing of cost in Shimoga Talaguppa broad gauge railway Project-reg.

**Preamble:**

Bangalore-Birur-Shimoga-Sagar-Talaguppa Train Service was introduced was back in 1940 as a meter gauge. Bangalore to Shimoga line has been converted to broad gauge. From Shimoga to Talaguppa, though the conversion work is sanctioned by the Railways, the work is progressing very slowly because of meagre funds allocated by the Railway Ministry. The length of this line is 107 K.M. and can be completed with a total cost of about Rs.140.00 crore. This gauge conversion project will facilitate industrial and tourism development Malnad area of Karnataka. This project will provide direct link to the tourists visiting the world famous Jog Falls and other tourists places.

2. Despite repeated requests made by the State Government to the Ministry of Railways for completing and commissioning this broad gauge line, the desired response has not been coming from the side of Railways.

3. The total requirement of funds for completion of this project is about Rs.140.00 crore and a provision of Rs.22.59 crore has been made by Railways during 2006-07. At this rate of allocation of funds, it will take many more years for commissioning of this important broad gauge line. Deducting the amount allocated during the current year, the requirement of funds for completing this broad gauge line would be about Rs.120.00 crore.

4. Considering the economic importance of the Malnad region and tremendous tourism potential, an offer was made by the State Government to meet 50% of the balance amount required for completion of this project in the next one year. The Railway Ministry has been requested to provide 50% of the required funds in the next Railway Budget for completion of this project during 2007-08. (A provision Rs.70.00 crore has been made in the Railway Budget 2007-08)

5. The Government of Karnataka after considering all the aspects, has decided to take up this railway project on 50:50 cost sharing basis between the Ministry of Railways and State Government. Hence this order.

**Government Order No. IDD 93 NSW 2006, Bangalore, Dated:12th March, 2007**

In the circumstances explained in the preamble sanction is hereby accorded for the following:

i) Signing of MoU with the Ministry of Railways for taking up Shimoga-Talaguppa broad gauge railway project on 50:50 cost sharing basis between the Ministry of Railways and Government of Karnataka.

ii) Sharing of 50% (Rs.60.00 crore) of the cost required for completion of this project and targeting the project for commissioning during 2007-08.

By Order and inthe Name of the Governor of Karnataka,
PR-436
**N. MANJULA GEETHA**
Under Secretary to Government,
Infrastructure Development Department.

## ಶಿಕ್ಷಣ ಸಚಿವಾಲಯ

**ವಿಷಯ:** ಎಸ್.ಸಿ./ಎಸ್.ಟಿ.. ಆಡಳಿತ ಮಂಡಳಿಯವರಿಂದ ನಡೆಸುತ್ತಿರುವ ಪದವಿ ಪೂರ್ವ ಕಾಲೇಜುಗಳಿಗೆ ಸ್ಥಿರ ನಿಧಿ ಠೇವಣಿ ಹಾಗೂ ಇತರೆ ಶುಲ್ಕಗಳ ಪಾವತಿಯಲ್ಲಿ ಶೇ 50 ರಿಯಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ:30.12.2004ರ ಸರ್ಕಾರದ ಆದೇಶ ಸಂಖ್ಯೆ. ಇಡಿ 04 ಟಿಪಿಯು 2002.

2 ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ. ಪಪೂಶಿಇ /ಮಾನ್ಯತೆ/ ಶುಲ್ಕ ರಿಯಾಯಿತಿ /2005-06, ದಿನಾಂಕ :4.3.3006.

**ಪ್ರಸ್ತಾವನೆ :**

ಪದವಿಪೂರ್ವ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:30.12.2004 ರನ್ವಯ ಪದವಿ ಪೂರ್ವ ಕಾಲೇಜುಗಳಿಗೆ ಸಂಬಂಧಿಸಿದಂತೆ ಸ್ಥಿರನಿಧಿ, ನೋಂದಣಿ ಶುಲ್ಕ ಇತ್ಯಾದಿ ಶುಲ್ಕಗಳನ್ನು ನಿಗಧಿಪಡಿಸಿ ಆದೇಶಿಸಿದೆ. ಈ ರೀತಿ ಶುಲ್ಕ ನಿಗಧಿಪಡಿಸುವಾಗ ಸಾಮಾನ್ಯ ವರ್ಗದ ಆಡಳಿತ ಮಂಡಳಿಯಂತೆ ಎಲ್ಲಾ ವರ್ಗದ ಆಡಳಿತ ಮಂಡಳಿಯ ಶಿಕ್ಷಣ ಸಂಸ್ಥೆಗಳಿಗೆ ಏಕರೀತಿಯಲ್ಲಿ ನಿಗಧಿಪಡಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ: 4.3.2006ರ ಪ್ರಸ್ತಾವನೆಯಲ್ಲಿ ಆಯುಕ್ತರು ಪದವಿ ಪೂರ್ವ ಶಿಕ್ಷಣ ಇಲಾಖೆ ರವರು ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡದ ಆಡಳಿತ ವರ್ಗದವರು ಪ್ರಾರಂಭಿಸುವ ಪದವಿ ಪೂರ್ವ ಕಾಲೇಜುಗಳಿಗೆ ಸಂಬಂಧಿಸಿದಂತೆ ಸ್ಥಿರ ಶುಲ್ಕ, ಸಂಯೋಜನಾ ಶುಲ್ಕ ಹಾಗೂ ನೋಂದಣಿ ಶುಲ್ಕದಲ್ಲಿ ಶೇ. 50 ರಷ್ಟು ರಿಯಾಯಿತಿ ನೀಡಲು ಪ್ರಸ್ತಾಪಿಸಿರುತ್ತಾರೆ. ಅವರ ಪ್ರಸ್ತಾವನೆಯಲ್ಲಿ ಇಂತಹ ರಿಯಾಯಿತಿಗಳು ಪ್ರೌಢಶಾಲೆ, ಪದವಿ ಕಾಲೇಜುಗಳು, ವೃತ್ತಿ ಶಿಕ್ಷಣ ತರಬೇತಿ ಕೇಂದ್ರಗಳನ್ನು ನಡೆಸುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಸಂಸ್ಥೆಗೆ ನೀಡಿರುತ್ತದೆ ಎಂದು ತಿಳಿಸಿ, ಈ ರೀತಿ ಪರಿಶಿಷ್ಟ ಜಾತಿ/ ಪರಿಶೀಷ್ಟ ಪಂಗಡದ ಆಡಳಿತ ಮಂಡಳಿಯವರು ನಡೆಸುವ ಪದವಿ ಪೂರ್ವ ಕಾಲೇಜುಗಳಿಗೂ ಸಹ ಸ್ಥಿರನಿಧಿ, ಸಂಯೋಜನಾ ಶುಲ್ಕ, ನೋಂದಣಿ ಶುಲ್ಕದಲ್ಲಿ ಶೇ. 50 ರಷ್ಟು ರಿಯಾಯಿತಿ ನೀಡುವ ಸೌಲಭ್ಯವನ್ನು ವಿಸ್ತರಿಸಿ ಸರ್ಕಾರದ ಆದೇಶ ನೀಡಲು ಕೋರಿರುತ್ತಾರೆ. ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಪರಿಶಿಷ್ಟ ಜಾತಿ /ಪರಿಶೀಷ್ಟ ಪಂಗಡದ ಆಡಳಿತ ಮಂಡಳಿಗಳು ನಡೆಸುತ್ತಿರುವ ಪದವಿ ಪೂರ್ವ ಕಾಲೇಜುಗಳಿಗೆ ಸಂಬಂಧಿಸಿದಂತೆ ಪಾವತಿಸಬೇಕಾದ ಸ್ಥಿರನಿಧಿ, ಸಂಯೋಜನಾ ಶುಲ್ಕ, ನೋಂದಣಿ ಶುಲ್ಕದಲ್ಲಿ ಶೇ. 50 ರಷ್ಟು ರಿಯಾಯಿತಿಯನ್ನು ಇತರ ವಿದ್ಯಾ ಸಂಸ್ಥೆಗಳು ನೀಡುತ್ತಿರುವಂತೆ ಶುಲ್ಕ ರಿಯಾಯಿತಿ ಸೌಲಭ್ಯವನ್ನು ಪದವಿ ಪೂರ್ವ ಕಾಲೇಜುಗಳಿಗೂ ವಿಸ್ತರಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 237 ಟಿಪಿಯು 2005 ಬೆಂಗಳೂರು, ದಿನಾಂಕ :29ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡದ ಶಿಕ್ಷಣ ಸಂಸ್ಥೆಗಳಿಂದ ನಡೆಸಲ್ಪಡುತ್ತಿರುವ ಪದವಿ ಪೂರ್ವ ಶಿಕ್ಷಣ ಸಂಸ್ಥೆಗಳು ಪ್ರಸ್ತುತ ಪಾವತಿಸಬೇಕಾದ ಸ್ಥಿರನಿಧಿ, ಸಂಯೋಜನಾ ಶುಲ್ಕ, ನೋಂದಣಿ ಶುಲ್ಕಗಳ ಮೊತ್ತದಲ್ಲಿ ಶೇ. 50 ರಷ್ಟು ರಿಯಾಯಿತಿ ನೀಡುವ ಸೌಲಭ್ಯವನ್ನು ವಿಸ್ತರಿಸಿ ಮಂಜೂರು ಮಾಡಿದೆ. ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡದ ಶಿಕ್ಷಣ ಸಂಸ್ಥೆಗಳಿಂದ ನಡೆಸಲ್ಪಡುತ್ತಿರುವ ಪದವಿ ಪೂರ್ವ ಕಾಲೇಜುಗಳಿಗೆ ಸ್ಥಿರನಿಧಿ ಠೇವಣಿ, ಸಂಯೋಜನಾ ಶುಲ್ಕ, ನೋಂದಣಿ ಶುಲ್ಕಗಳ ಪಾವತಿಯಲ್ಲಿ ಶೇಕಡ 50ರ ರಿಯಾಯಿತಿ ಸೌಲಭ್ಯವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಭವಿಷ್ಯಾನ್ವಯವಾಗಿ ನೀಡಲು ಅನುಮತಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ. ಆಇ 1359 ವೆಚ್ಚ-8/2006, ದಿನಾಂಕ:18.1.2007ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಲಿಂಗಯ್ಯ**

ಪಿ.ಆರ್. 264

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

**ವಿಷಯ:** ಶಿವಮೊಗ್ಗದಲ್ಲಿನ ಬಾಲಕಿಯರ ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** 1. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರಸಂಖ್ಯೆ:ಡಿ.ಟಿ.ಇ. 25:ಬಿ.ಎಲ್.ಡಿ. 2004:ದಿ:6.1.2007

**ಪ್ರಸ್ತಾವನೆ :**

ಮೇಲೆ ಓದಲಾದ ದಿ:6.1.2007ರ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರದಲ್ಲಿ ಬಾಲಕಿಯರ ಸರ್ಕಾರಿ ಪಾಲಿಟೆಕ್ನಿಕ್ ಶಿವಮೊಗ್ಗ ಕಾಲೇಜಿನ ಕಟ್ಟಡ ನಿರ್ಮಾಣಕ್ಕೆ 2006-07ನೇ ಸಾಲಿಗೆ ಅಪೆಂಡಿಕ್ಸ್-ಇ ಯಡಿಯಲ್ಲಿ ಸದರಿ ಕಾಲೇಜಿಗೆ ಕಟ್ಟಡ ನಿರ್ಮಾಣಕ್ಕೆ ರೂ .30.00 ಲಕ್ಷ .[ರೂಪಾಯಿಮೂವತ್ತು ಲಕ್ಷಗಳು ಮಾತ್ರ] ಒದಗಿಸಿಕೊಳ್ಳಾಗಿದೆ ಎಂದು ತಿಳಿಸಿ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ಇವರಿಂದ ಪಡೆದ ರೂ. 100.00 ಲಕ್ಷ [ರೂಪಾಯಿ ಒಂದು ನೂರು ಲಕ್ಷಗಳು ಮಾತ್ರ] ಅಂದಾಜು ಪಟ್ಟಿಯನ್ನು ಕಳುಹಿಸಿ ಮೇಲ್ಕಂಡ ಮೊತ್ತಕ್ಕೆ ಆಡಳಿತಾತ್ಮಕ ಮಂಜೂರಾತಿಗಾಗಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶಿಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 16 ಯೋಸಕಾ 2007, ಬೆಂಗಳೂರು ದಿನಾಂಕ:1ನೇ ಫೆಬ್ರವರಿ 2007**

[ಇಡಿ: 5: ಸ್ಪೀಮರ (ಯುನಿಕ್) 2007 ದಿ:1.2.2007]

2006-07ನೇ ಸಾಲಿಗೆ ಅಪೆಂಡಿಕ್ಸ್-ಇ ನಲ್ಲಿ ಒದಗಿಸಿರುವ ಮೊತ್ತಕ್ಕೆ ಸೀಮಿತವಾಗಿ ಶಿವಮೊಗ್ಗದಲ್ಲಿನ ಬಾಲಕಿಯರ ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡ ನಿರ್ಮಾಣದ ರೂ.100.00ಲಕ್ಷ [ರೂಪಾಯಿ ಒಂದು ನೂರು ಲಕ್ಷಗಳು ಮಾತ್ರ] ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರವು ಅನುಮತಿ ನೀಡಿದೆ ಹಾಗೂ 2006-07ನೇ ಸಾಲಿಗೆ ಅಪೆಂಡಿಕ್ಸ್-ಇ ನಲ್ಲಿ ಒದಗಿಸಿರುವ ಮೊತ್ತಕ್ಕೆ ಸೀಮಿತವಾಗಿ ಈ ಸಾಲಿಗೆ ಕಾಮಗಾರಿಯನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳುವಂತೆ ಆದೇಶಿಸಲಾಗಿದೆ.

ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 265

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಯೋಜನೆ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ನಂಜುಂಡ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ವಿರುದ್ಧ ಇಲಾಖಾ ವಿಚಾರಣೆ-ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ನೋಟೀಸ್ ಸಂಖ್ಯೆ: ಸಿಆಸುಇ 48 ಎಸ್‌ಇಎನ್ 2004 ದಿನಾಂಕ:6.5.2004.
2. ಶ್ರೀ ನಂಜುಂಡ, ನಿವೃತ್ತ ಸರ್ಕಾರ ಅಧೀನ ಕಾರ್ಯದರ್ಶಿರವರ ದಿನಾಂಕ:6.7.2004 ರ ಲಿಖಿತ ಉತ್ತರ.
3. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅ.ಟಿ. ಸಂಖ್ಯೆ:ಆಕುಕ 31 ಪಸ್ವೀರ 2004 ದಿನಾಂಕ:9.10.2006.

**ಪ್ರಸ್ತಾವನೆ :**

ಶ್ರೀ ನಂಜುಂಡ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಅವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೃಂದ ಮತ್ತು ನೇಮಕಾತಿ ವಿಭಾಗದಲ್ಲಿ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದಿ:31.8.03 ರಂದು ನಿವೃತ್ತಿ ಆಗುವ ದಿನದಂದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ದಿನಗೂಲಿ ನೌಕರರಾಗಿ ಕೆಲಸ ಮಾಡುತ್ತಿದ್ದ ಶ್ರೀಮತಿ ಗೌರಮ್ಮ ಇವರನ್ನು ಕೆಲಸಕ್ಕೆ ತೆಗೆದುಕೊಳ್ಳಲು ನಿಯಮಾನುಸಾರ ಆಸ್ಪದವಿಲ್ಲದಿದ್ದರೂ ಮೇಲಾಧಿಕಾರಿಗಳ ಅನುಮತಿ ಇಲ್ಲದೆ ಅವರನ್ನು ಗ್ರೂಫ್-ಡಿ ನೌಕರರಾಗಿ ಕೆಲಸಕ್ಕೆ ತೆಗೆದುಕೊಂಡು ಖೋಟಾ ಆದೇಶ ಹೊರಡಿಸಿರುವ ಆರೋಪ ಹಾಗೂ ಇಲಾಖೆಯ 2 ಶುಶ್ರೂಷಕಿಯರ ಪರಸ್ಪರ ವರ್ಗಾವಣೆಗೆ ಖೋಟಾ ಆದೇಶ ಹೊರಡಿರುವ ಆರೋಪ ಹಾಗೂ ಶ್ರೀ ಬಿ.ಎಸ್. ಪ್ರಕಾಶ್‌ರಾವ್, ಫಾರ್ಮಸಿಸ್ಟ್ ಇವರ ವರ್ಗಾವಣೆಗೆ ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೆ ನಿರ್ದೇಶನ ನೀಡಿರುವ ಆರೋಪಗಳಿಗೆ ಸಂಬಂಧಿಸಿದಂತೆ ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿ:6.5.04ರ ನೋಟೀಸ್ ಜಾರಿ ಮಾಡಿ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಶ್ರೀ ನಂಜುಂಡ ಅವರು ಸಲ್ಲಿಸಿದ ಮೇಲೆ (2)ರಲ್ಲಿ ಓದಲಾದ ಉತ್ತರವನ್ನು ಪರಿಶೀಲಿಸಿ ಅವರ ವಿರುದ್ಧ ವಿಚಾರಣೆ ಮುಂದುವರಿಸುವ ಬಗ್ಗೆ ಆಡಳಿತ ಇಲಾಖೆಯ ಅಭಿಪ್ರಾಯ ಕೋರಲಾಗಿತ್ತು. ಮೇಲೆ (3)ರಲ್ಲಿ ಓದಲಾದ ದಿ:9.10.06ರ ಅನಧಿಕೃತ ಟಿಪ್ಪಣಿಯಲ್ಲಿ ಆಪಾದನೆಗಳ ಬಗ್ಗೆ ಸಿ.ಓ.ಡಿ. ತನಿಖೆ ಮಾಡಲಾಗಿ ಅವರು ಇದು ನ್ಯಾಯಾಲಯದಲ್ಲಿ ತನಿಖೆ ನಡೆಸಲು ತಕ್ಕ ಪ್ರಕರಣವಲ್ಲವೆಂದು ತಿಳಿಸಿದ ಕಾರಣ ಆಪಾದಿತ ಅಧಿಕಾರಿಯವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ಇದು ಸೂಕ್ತ ಪ್ರಕರಣವಲ್ಲವೆಂದು ತಿಳಿಸಿರುತ್ತಾರೆ. ಆದುದರಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಭಿಪ್ರಾಯವನ್ನು ಒಪ್ಪಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 48 ಎಸ್‌ಇಎನ್ 2004 ಬೆಂಗಳೂರು, ದಿನಾಂಕ: 29ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಸರ್ಕಾರವು, ಶ್ರೀ ನಂಜುಂಡ, ನಿವೃತ್ತ ಸರ್ಕಾರದ ಅಧಿನ ಕಾರ್ಯದರ್ಶಿ ರವರ ವಿರುದ್ಧ ದಿ:6.5.2004ರ ನೋಟೀಸಿನಲ್ಲಿ ಮಾಡಲಾದ ದೋಷಾರೋಪಣೆಗಳಿಂದ ಅವರನ್ನು ಆರೋಪಮುಕ್ತರನ್ನಾಗಿಸುತ್ತದೆ.

ಈ ವಿಚಾರಣಾ ಪ್ರಕ್ರಿಯೆ ನಡೆಯದಿದ್ದಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ನಂಜುಂಡ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಆ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 266

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

**ವಿಷಯ:** ದಿನಾಂಕ:26.1.2007ರ ಗಣರಾಜ್ಯೋತ್ಸವದಂದು ಧ್ವಜಾರೋಹಣ ಮಾಡಲು ಸಚಿವರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಚಾಮರಾಜನಗರ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ ಎಡಿಎಂ:ಸಿಆರ್:274:2006-07, ದಿನಾಂಕ :12.1.2007.

**ಪ್ರಸ್ತಾವನೆ :**

ಚಾಮರಾಜನಗರ ಮತ್ತು ಮೈಸೂರು ಎರಡೂ ಜಿಲ್ಲೆಗಳಿಗೆ ಸನ್ಮಾನ್ಯ ವಸತಿ ಸಚಿವರನ್ನು ಉಸ್ತುವಾರಿ ಸಚಿವರನ್ನಾಗಿ ನೇಮಿಸಿದ್ದು, ದಿನಾಂಕ: 26.1.2007 ರಂದು ನಡೆಯುವ ಗಣರಾಜ್ಯೋತ್ಸವ ದಿನದಂದು ಮೈಸೂರು ಮತ್ತು ಚಾಮರಾಜನಗರ ಎರಡೂ ಜಿಲ್ಲೆಗಳ ಸಮಾರಂಭಗಳಲ್ಲಿ ಏಕ ಕಾಲದಲ್ಲಿ ಭಾಗವಹಿಸಲು ಸಾಧ್ಯವಾಗುವುದಿಲ್ಲ ಎಂದು ತಿಳಿಸುತ್ತಾ ಈ ಬಗ್ಗೆ ಸೂಕ್ತ ಸ್ಪಷ್ಟೀಕರಣ ಕೋರಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 4 ರಾರಾಆ 2007 ಬೆಂಗಳೂರು, ದಿನಾಂಕ: 25ನೇ ಜನವರಿ 2007**

ದಿನಾಂಕ:26.1.2007 ರಂದು ರಾಜ್ಯದಲ್ಲಿ ನಡೆಯುವ ಗಣರಾಜ್ಯೋತ್ಸವ ಸಮಾರಂಭಗಳಲ್ಲಿ ಧ್ವಜಾರೋಹಣ ಮಾಡಲು ಈ ಕೆಳಗೆ ನಮೂದಿಸಿರುವಂತೆ ಆಯಾ ಜಿಲ್ಲೆಗಳ ಹೆಸರುಗಳ ಮುಂದೆ ಸೂಚಿಸಿರುವಂತೆ ಸಚಿವರುಗಳನ್ನು ನೇಮಿಸಿದೆ.

| ಕ್ರ. ಸಂ. | ಜಿಲ್ಲೆಗಳ ಹೆಸರು | ಸಚಿವರ ಹೆಸರು |
|---|---|---|
| 1 | ಬಾಗಲಕೋಟೆ | ಶ್ರೀ ಗೋವಿಂದ ಎಂ ಕಾರಜೋಳ |
| 2 | ಬೆಂಗಳೂರು | ಶ್ರೀ ಹೆಚ್.ಡಿ. ಕುಮಾರಸ್ವಾಮಿ |
| 3 | ಬೆಳಗಾವಿ | ಶ್ರಿ ಶಶಿಕಾಂತ ನಾಯಕ್ |
| 4 | ಬಳ್ಳಾರಿ | ಶ್ರೀ ಎಂ.ಪಿ. ಪ್ರಕಾಶ್ |

| ಕ್ರ. ಸಂ. | ಜಿಲ್ಲೆಗಳ ಹೆಸರು | ಸಚಿವರ ಹೆಸರು |
|---|---|---|
| 5 | ಬೀದರ್ | ಶ್ರೀ ಬಂಡೆಪ್ಪ ಕಾಶಂಪೂರ್ |
| 6 | ಬಿಜಾಪುರ | ಶ್ರೀ ಅಪ್ಪು ಪಟ್ಟಣಶೆಟ್ಟಿ |
| 7 | ಚಾಮರಾಜನಗರ | ಶ್ರೀ ಹೆಚ್.ಎಸ್. ಮಹದೇವ ಪ್ರಸಾದ್ |
| 8 | ಚಿಕ್ಕಮಗಳೂರು | ಶ್ರೀ ಡಿ.ಹೆಚ್. ಶಂಕರಮೂರ್ತಿ |
| 9 | ಚಿತ್ರದುರ್ಗ | ಶ್ರಿ ಬಸವರಾಜ ಹೊರಟ್ಟಿ |
| 10 | ದಾವಣಗೆರೆ | ಶ್ರಿ ಎಸ್.ಎ. ರವೀಂದ್ರನಾಥ್ |
| 11 | ಧಾರವಾಡ | ಶ್ರೀ ಜಗದೀಶ ಶೆಟ್ಟರ್ |
| 12 | ಗದಗ | ಶ್ರೀ ಎಸ್. ಶ್ರೀರಾಮುಲು |
| 13 | ಗುಲ್ಬರ್ಗಾ | ಶ್ರೀ ಎಸ್. ದರ್ಶನಾಪುರ |
| 14 | ಹಾಸನ | ಶ್ರೀ ಹೆಚ್.ಡಿ. ರೇವಣ್ಣ |
| 15 | ಹಾವೇರಿ | ಶ್ರೀ ಸಿ.ಎಂ. ಉದಾಸಿ |
| 16 | ಉತ್ತರ ಕನ್ನಡ | ಶ್ರೀ ಶಿವಾನಂದ ನಾಯಕ್ |
| 17 | ಕೊಡಗು | ಶ್ರೀ ರಾಮಚಂದ್ರಗೌಡ |
| 18 | ಕೋಲಾರ | ಶ್ರಿ ಆರ್. ಶ್ರೀನಿವಾಸ್ |
| 19 | ಕೊಪ್ಪಳ | ಶ್ರೀ ಇಕ್ಬಾಲ್ ಅನ್ಸಾರಿ |
| 20 | ಮಂಡ್ಯ | ಶ್ರೀ ಎನ್. ಚಲುವರಾಯಸ್ವಾಮಿ |
| 21 | ದಕ್ಷಿಣ ಕನ್ನಡ | ಶ್ರೀ ಬಿ. ನಾಗರಾಜ ಶೆಟ್ಟಿ |
| 22 | ಮೈಸೂರು | ಶ್ರೀ ಡಿ.ಟಿ. ಜಯಕುಮಾರ್ |
| 23 | ರಾಯಚೂರು | ಶ್ರೀ ಅಲ್ಕೋಡು ಹನುಮಂತಪ್ಪ |
| 24 | ಶಿವಮೊಗ್ಗ | ಶ್ರೀ ಬಿ.ಎಸ್. ಯಡಿಯೂರಪ್ಪ |
| 25 | ತುಮಕೂರು | ಶ್ರೀ ಸಿ. ಚೆನ್ನಿಗಪ್ಪ |
| 26 | ಉಡುಪಿ | ಡಾ : ವಿ.ಎಸ್. ಆಚಾರ್ಯ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವೀರಣ್ಣ**

ಪಿ.ಆರ್. 269

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ರಾಜಕೀಯ)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಜಲಸಂಪನ್ಮೂಲ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 2 ಸಸಿವಿ 2002 ದಿನಾಂಕ :23.1.2002

2 ಸರ್ಕಾರಿ ಆದೇಶ ಸಂಖ್ಯೆ :ಸಿಆಸುಇ 88 ಸಸಿವಿ 2005 ದಿನಾಂಕ:5.1.2006.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:23.1.2002ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ದಿನಾಂಕ:18.2.2002 ರಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಈ ಕೆಳಕಂಡ ಹುದ್ದೆಗಳನ್ನು ತತ್ಕಾಲಿಕವಾಗಿ ಸೃಜಿಸಲಾಗಿದೆ.

| | | |
|---|---|---|
| 1 | ಪ್ರಧಾನ ಕಾರ್ಯದರ್ಶಿ<br>ಜಲಸಂಪನ್ಮೂಲ ಇಲಾಖೆ (ಐ.ಎ.ಎಸ್. ಅಧಿಕಾರಿಯಿಂದ ತುಂಬುವುದು) | 1 ಹುದ್ದೆ |
| 2 | ಆಪ್ತಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್-2): ಪತ್ರಾಂಕಿತ ಆಪ್ತ ಸಹಾಯಕ) | 1 ಹುದ್ದೆ |
| 3 | ಶೀಘ್ರಲಿಪಿಗಾರ (ಪತ್ರಾಂಕಿತ ಆಪ್ತ ಸಹಾಯಕ :ಹಿರಿಯ ಶೀಘ್ರಲಿಪಿಗಾರ) | 2 ಹುದ್ದೆಗಳು |
| 4 | ಭಾಷಾಂತರಕಾರರು (ಶಾಖಾಧಿಕಾರಿ)- ಹಿರಿಯ ಸಹಾಯಕ | 1 ಹುದ್ದೆ |
| 5 | ಕಿರಿಯ ಸಹಾಯಕ | 1 ಹುದ್ದೆ |
| 6 | ವಾಹನ ಚಾಲಕ | 1 ಹುದ್ದೆ |
| 7 | ದಲಾಯತ್ | 2 ಹುದ್ದೆಗಳು |
| | ಒಟ್ಟು | 9 ಹುದ್ದೆಗಳು |

ನಂತರ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ:5.1.2006ರ ಸರ್ಕಾರಿ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ:1.1.2006 ರಿಂದ 31.12.2006 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ. ಪ್ರಸ್ತುತ ಈ ಹುದ್ದೆಗಳ ವಿಸ್ತರಿತ ಕಾಲಾವಧಿಯು ದಿನಾಂಕ:31.12.2006ಕ್ಕೆ ಮುಕ್ತಾಯಗೊಂಡಿರುವ ಹಿನ್ನಲೆಯಲ್ಲಿ ಈ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 100 ಸಸಿವಿ 2006 ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2007**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವ ಪೂರಕ 8 ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1.1.2007 ರಿಂದ 31.12.2007 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ :10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 270

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-2)

## ಕಂದಾಯ ಸಚಿವಾಲಯ

**ವಿಷಯ:** ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು, ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿಗಳ ಬದಲಾವಣೆ ಹಾಗೂ ಆಡಳಿತಾಧಿಕಾರಿಗಳ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ :ಕಂಇ 53 ಮುನೊಸೊ 2006 ದಿನಾಂಕ :31.10.2006.

2 ಆಡಳಿತಾಧಿಕಾರಿಗಳು, ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು, ಇವರ ಪತ್ರ ಸಂಖ್ಯೆ: ಹೆಚ್.ಆರ್.ಸಿ. (ಉ) ಸಿಬ್ಬಂದಿ:ಸಿಆರ್:60:2006-07 ದಿನಾಂಕ:14.11.2006.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಆದೇಶದಲ್ಲಿ ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು ಈ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿತ್ತು. ಓದಲಾದ (2)ರಲ್ಲಿ ಆಡಳಿತಾಧಿಕಾರಿಯವರು ಸಲ್ಲಿಸಿರುವ ವರದಿಯಲ್ಲಿ ನ್ಯಾಯಾಲಯದ ಹಾಗೂ ಅಧಿಕ ಪ್ರಭಾರ ಕೆಲಸದ ಒತ್ತಡ ಜಾಸ್ತಿ ಇರುವುದರಿಂದ ಆಡಳಿತಾಧಿಕಾರಿ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಆದ್ದರಿಂದ ಓದಲಾದ 2 ರ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ಬದಲಾಯಿಸಲು ಹಾಗೂ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 53 ಮುನೊಸೊ 2006 ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶದ ಸಂಖ್ಯೆ:ಕಂಇ 53 ಮುನೊಸೊ 2006 ದಿನಾಂಕ:31.10.2006 ರಲ್ಲಿ ಸಿಟಿ ಫ್ಯಾಮಿಲೀಸ್ ಅಸೋಸಿಯೇಷನ್ (ರಿ) ರಾಜಾಜಿನಗರ, ಬೆಂಗಳೂರು, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27-ಎ ಪ್ರಕಾರ ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ಮನೆ ಬಾಡಿಗೆ ಮತ್ತು ವಸತಿ ನಿಯಂತ್ರಣಾಧಿಕಾರಿ, ಬೆಂಗಳೂರು ಉತ್ತರ ಇವರನ್ನು ಬದಲಾಯಿಸಿ ಶ್ರೀ ಸೋಮಶೇಖರ್, ಕ್ಷೇತ್ರ ಶಿಕ್ಷಣಾಧಿಕಾರಿ, ಉತ್ತರ ವಲಯ-1, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು-3 ಇವರನ್ನು ಆಡಳಿತಾಧಿಕಾರಿಯಾಗಿ ನೇಮಿಸಿದೆ. ಹಾಗು ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ: 26.11.2006 ರಿಂದ 25.5.2007 ರವರೆಗೆ ವಿಸ್ತರಿಸಿದೆ ಈ ನಿಗದಿತ ಅವಧಿಯಲ್ಲಿಯೇ ಆಡಳಿತಾಧಿಕಾರಿಗಳು ಸಂಸ್ಥೆಗೆ ಚುನಾವಣೆಯನ್ನು ಕಟ್ಟುನಿಟ್ಟಾಗಿ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 273

**ಶಿವಲಿಂಗ**

ಫೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಶ್ರೀ ಎಚ್. ಶಂಕರಪ್ಪ, ಉಪನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಸಹನಿರ್ದೇಶಕರ ಹುದ್ದೆಗೆ ಪದೋನ್ನತಿ ನೀಡುವ ಕುರಿತು ಪರಿಶೀಲಿಸುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ. 627 /1998ರಲ್ಲಿ ದಿನಾಂಕ:3.3.2006 ರಮದು ನೀಡಿದ ಆದೇಶ.

2 ಸರ್ಕಾರಿ ವಕೀಲರು, ಕೆ.ಎ.ಟಿ. ಘಟಕ ಅಡ್ವೋಕೇಟ್ ಜನರಲ್ಲರ ಕಛೇರಿ, ಬೆಂಗಳೂರು ಅವರ ಪತ್ರ ಸಂಖ್ಯೆ:1801 /ಎಜಿ/ಕೆಎಟಿ/06 ದಿನಾಂಕ :17.5.2006.

3 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಕಾನೂನು ಕೋಶವು ಹೊರಡಿಸಿದ ಅಧಿಕೃತ ಜ್ಞಾಪನಾ ಸಂಖ್ಯೆ ಡಿಪಿಎಆರ್ 138 ಎಲ್ ಸಿ 2006 ದಿನಾಂಕ:31.7.2006.

4 ಕರ್ನಾಟಕ ಉಚ್ಛ ನ್ಯಾಯಾಲಯವು ರಿಟ್ ಅರ್ಜೀ ಸಂಖ್ಯೆ 5643/2006 ರಲ್ಲಿ ದಿನಾಂಕ:3.7.2006 ರಂದು ನೀಡಿದ ಮಧ್ಯಂತರ ಆದೇಶ.

5 ಶ್ರೀ ಎಚ್. ಶಂಕರಪ್ಪ, ಉಪನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ದಿನಾಂಕ:10.11.2006ರ ಮನವಿ.

**ಪ್ರಸ್ತಾವನೆ :**

ಶ್ರೀ ಎಚ್. ಶಂಕರಪ್ಪ, ಉಪನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ 627/1998ನ್ನು ಸಲ್ಲಿಸಿ ದಿನಾಂಕ 9.12.1996ರ ಸರ್ಕಾರಿ ಆದೇಶ ಸಂಖ್ಯೆ ಸಂಕಇ 159 ಕಸನಿ 96 ಹಾಗೂ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಂದ ನೀಡಲ್ಪಟ್ಟ ದಿನಾಂಕ: 22.1.1997ರ ಹಿಂಬರಹ ಸಂಖ್ಯೆ ಕಸನಿ 89 ಸಿಬ್ಬಂದಿ /2/96-97 ಇವುಗಳನ್ನು ರದ್ದುಪಡಿಸಿ ಜಂಟಿ ನಿರ್ದೇಶಕರಾದ ಶ್ರೀ ಕೆ.ಟಿ. ಚಿಕ್ಕಣ್ಣ ಅವರಿಗಿಂತ ಮೇಲಿನ ಸ್ಥಾನಕ್ಕೆ ತಮ್ಮ ಜೇಷ್ಠತೆಯನ್ನು ಸಹಾಯಕ ನಿರ್ದೇಶಕರ ವೃಂದದಲ್ಲಿ ನಿಗದಿಪಡಿಸಿ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ತಮಗೆ ಉಪನಿರ್ದೇಶಕರು ಹಾಗೂ ಹೆಚ್ಚಿನ ವೃಂದಕ್ಕೆ ಪದೋನ್ನತಿ ನೀಡುವಂತೆ ನಿರ್ದೇಶನ ನೀಡಲು ಕೋರಿದರು. ಈ ಅರ್ಜಿಯ ವಿಚಾರಣೆ ನಡೆಸಿದ ನ್ಯಾಯ ಮಂಡಳಿಯು ಮೇಲೆ (1)ರಲ್ಲಿ ಓದಲಾದ ದಿನಾಂಕ:3.3.2006ರ ಆದೇಶ ನೀಡಿ ಅರ್ಜಿಯನ್ನು ಪುರಸ್ಕರಿಸಿ 9.12.1996ರ ಸರ್ಕಾರಿ ಆದೇಶ ಹಾಗೂ 22.1.1997ರ ಹಿಂಬರಹಗಳನ್ನು ಅಸಿಂಧು ಎಂದು ಪರಿಗಣಿಸಿ ರದ್ದುಪಡಿಸಿತು ಹಾಗೂ ಇಲಾಖೆಯಲ್ಲಿ ಎಚ್.ಶಂಕರಪ್ಪ ಅವರ ವಿಲೀನವನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಎಂದು ಪರಿಗಣಿಸಿ ಅವರ ಜೇಷ್ಠತೆಯನ್ನು ಜೇಷ್ಠತೆ ನಿಯಮಾವಳಿ 1957ರ ನಿಯಮ 6ರೊಡನೆ ಓದಿಕೊಂಡಂತೆ ಸಾಮಾನ್ಯ ನೇಮಕಾತಿ ನಿಯಮಾವಳಿ 1977ರ ನಿಯಮ 16(ಎ) (II) ರನ್ವಯ ಮರು ನಿಗದಿಪಡಿಸುವಂತೆ ನಿರ್ದೇಶನ ನೀಡಿತು. ಸರ್ಕಾರಿ ವಕೀಲರು, ಕೆ.ಎ.ಟಿ ಘಟಕ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:17.5.2006ರ ಪತ್ರದಲ್ಲಿ ವಾಸ್ತವಾಂಶ ಮತ್ತು ಸಂದರ್ಭಗಳನ್ನು ಪರಿಗಣಿಸಿಹೊರಡಿಸಲಾದ ಆದೇಶದಿಂದಾಗಿ ಇದು ಮುಂದುವರಿಯಲು ಸೂಕ್ತವಾದ ಪ್ರಸರಣ ಅಲ್ಲವೆಂದು ಅಭೀಪ್ರಾಯ ಪಟ್ಟಿದ್ದಾರೆ. ಇದನ್ನು ಪರಾಮರ್ಶಿಸಿದ ಸಿ.ಆ.ಸು.ಇಲಾಖೆಯ ಕಾನೂನು ಕೋಶವು ಮೇಲೆ(3)ರಲ್ಲಿ ಓದಲಾದ ದಿನಾಂಕ:31.7.2006ರ ಅಧಿಕೃತ ಜ್ಞಾಪನದಲ್ಲಿ ಇದು ಮೇಲ್ಮನವಿ ಸಲ್ಲಿಸಲು ಸೂಕ್ತವಾದ ಪ್ರಕರಣ ಅಲ್ಲವೆಂದು ನಿರ್ಣಯಿಸಿದೆ.

ಈ ಕಾರಣದಿಂದಾಗಿ ಈ ಪ್ರಕರಣದಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ:3.3.2006ರಂದು ನೀಡಿದ ಆದೇಶವು ಅಂತಿಮವಾಗಿದೆ. ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಕಾನೂನು ಕೋಶದ ಅಭಿಪ್ರಾಯದೊಡನೆ ದಿನಾಂಕ:2.8.2006ರಂದು ಸ್ವೀಕರಿಸಲಾಯಿತು. ಈ ವೇಳೆಗಾಗಲೇ ಶ್ರೀ ಕೆ.ಟಿ. ಚಿಕ್ಕಣ್ಣ, ಸಹನಿರ್ದೇಶಕರು, ಕರ್ನಾಟಕ ನ್ಯಾಯ ಮಂಡಳಿಯ ದಿನಾಂಕ:3.3.2006ರ ಆದೇಶದ ವಿರುದ್ದ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ 5643 /2006ನ್ನು ಸಲ್ಲಿಸಿದರು. ಈ ಅರ್ಜಿಯ ಕುರಿತು ರಾಜ್ಯ ಉಚ್ಚ ನ್ಯಾಯಾಲಯವು ಮೇಲೆ (4)ರಲ್ಲಿ ಓದಲಾದ ದಿನಾಂಕ:3.7.2006ರ ಮಧ್ಯಂತರ ಆದೇಶ ನೀಡಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ:3.3.2006ರ ಆದೇಶಕ್ಕೆ ತಡೆಯಾಜ್ಞೆ ನೀಡಿತು ಹಾಗು ಶ್ರೀ ಕೆ.ಟಿ. ಚಿಕ್ಕಣ್ಣ ಅವರ ಜೇಷ್ಟತೆ ಮತ್ತು ಸೇವಾ ವ್ಯವಸ್ಥೆಗೆ ಚ್ಯುತಿ ಬರದಂತೆ ಶ್ರೀ ಎಚ್. ಶಂಕರಪ್ಪ ಅವರಿಗೆ ಪದೋನ್ನತಿ ನೀಡುವುದನ್ನು ಪರಿಗಣಿಸಬಹುದೆಂದು ತಿಳಿಸಿತು. ತಡೆಯಾಜ್ಞೆಯನ್ನು ತೆರವುಗೊಳಿಸುವಂತೆ ಕೋರಿ ಶ್ರೀ ಎಚ್. ಶಂಕರಪ್ಪ ಅವರು ದಿನಾಂಕ:18.9.2006ರಂದು ಸಲ್ಲಿಸಿದ ವಾದ ಕಾಲೀನ ಅರ್ಜಿಯ ವಿಚಾರಣೆ ನಡೆಸಿದ ರಾಜ್ಯ ಉಚ್ಚ ನ್ಯಾಯಾಲಯವು ದಿನಾಂಕ 31.10.2006ರ ಆದೇಶ ನೀಡಿ ಕೆ.ಟಿ. ಚಿಕ್ಕಣ್ಣ ಅವರ ಜೇಷ್ಠತೆ ಹಾಗು ಸೇವಾ ವ್ಯವಸ್ಥೆಗಳಿಗೆ ಚ್ಯುತಿ ಬಾರದಂತೆ ಎಚ್. ಶಂಕರಪ್ಪ ಅವರನ್ನು ಪದೋನ್ನತಿಗೆ ಪರಿಗಣಿಸಲು ದಿನಾಂಕ :3.7.2006ರ ಮಧ್ಯಂತರ ಆದೇಶದಿಂದಾಗಿ ಯಾವುದೇ ತೊಡಕು ಉಂಟಾಗುವುದಿಲ್ಲವಾದ ಕಾರಣ ಅದನ್ನು ತೆರವುಗೊಳಿಸಲು ಯಾವುದೇ ಸಕಾರಣಗಳಿಲ್ಲವೆಂದು ವಾದ ಕಾಲೀನ ಅರ್ಜಿಯನ್ನು ವಿಲೇವಾರಿ ಮಾಡಿತು. ಈ ಆದೇಶದ ಪ್ರತಿಯನ್ನು ಲಗತ್ತಿಸಿ ಮೇಲೆ (5)ರಲ್ಲಿ ಓದಲಾದ ದಿನಾಂಕ:10.11.2006ರ ಮನವಿ ಸಲ್ಲಿಸಿದ ಶ್ರೀ ಎಚ್. ಶಂಕರಪ್ಪ ಉಪನಿರ್ದೇಶಕರು ಸದರಿ ಆದೇಶದಂತೆ ಕೆ.ಟಿ. ಚಿಕ್ಕಣ್ಣ ಅವರಿಗೆ ಉಪನಿರ್ದೇಶಕರಾಗಿ, ಜಂಟಿ ನಿರ್ದೇಶಕರಾಗಿ ಪದೋನ್ನತಿ ನೀಡಿದ ದಿನಾಂಕದಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅವರಿಗೂ ಪದೋನ್ನತಿ ನೀಡುವಂತೆ ಕೋರಿದ್ದಾರೆ ಹಾಗೂ ತೆರವಾಗಿರುವ ಜಂಟಿ ನಿರ್ದೇಶಕರ ಹುದ್ದೆಗೆ ತಮ್ಮನ್ನು ಹೆಚ್ಚಿನ ಪ್ರಭಾರದಲ್ಲಿ ನಿಯೋಜಿಸುವಂತೆ ಕೋರಿದ್ದಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ:3.3.2006ರ ತನ್ನ ಆದೇಶದಲ್ಲಿ ಎಚ್.ಶಂಕರಪ್ಪ ಅವರನ್ನು ಕೆ.ಟಿ. ಚಿಕ್ಕಣ್ಣ ಅವರಿಗಿಂತ ಜೇಷ್ಠತೆಯಲ್ಲಿ ಹಿರಿಯರೆಂದು ನಿರ್ಣಯಿಸಿದೆ. ಈ ಆದೇಶದ ವಿರುದ್ಧ ಸರ್ಕಾರದ ವತಿಯಿಂದ ಮೇಲ್ಮನವಿ ಸಲ್ಲಿಸದಿರಲು ನಿರ್ಣಯಿಸಲಾಗಿದೆ. ಆದ್ದರಿಂದ ಸರ್ಕಾರದ ದೃಷ್ಟಿಯಲ್ಲಿ ದಿನಾಂಕ:3.3.2006ರ ಕೆ.ಎ.ಟಿ. ಆದೇಶ ಅಂತಿಮವಾಗಿದೆ. ರಾಜ್ಯ ಉಚ್ಚ ನ್ಯಾಯಾಲಯವೂ ಸಹ ತನ್ನ ದಿನಾಂಕ:3.7.2006 ಹಾಗೂ 31.10.2006ರ ಮಧ್ಯಂತರ ಆದೇಶದಲ್ಲಿ ಕೆ.ಟಿ. ಚಿಕ್ಕಣ್ಣ ಅವರ ಜೇಷ್ಠತೆ ಮತ್ತು ಸೇವಾ ವ್ಯವಸ್ಥೆಗೆ ಚ್ಯುತಿ ಬಾರದಂತೆ ಎಚ್. ಶಂಕರಪ್ಪ ಅವರಿಗೆ ಪದೋನ್ನತಿ ನೀಡುವುದನ್ನು ಪರಿಗಣಿಸಬಹುದೆಂದು ತಿಳಿಸಿದೆ. ಈ ಮಧ್ಯೆ ಎಚ್. ಶಂಕರಪ್ಪ ಅವರು ರಾಜ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ಪದೋನ್ನತಿ ನೀಡಿಲ್ಲವೆಂದು ದೂರಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ 732/2006ನ್ನು ದಿನಾಂಕ:8.12.2006 ರಂದು ಸಲ್ಲಿಸಿದ್ದಾರೆ. ಇದರ ಮೇಲೆ ದಿನಾಂಕ:15.12.2006ರ ಆದೇಶ ಹೊರಡಿಸಿದ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ತನ್ನ ದಿನಾಂಕ:3.3.2006ರ ನಿರ್ದೇಶನವನ್ನು ದಿನಾಂಕ:9.2.2007ರೊಳಗೆ ಪಾಲಿಸಬೇಕೆಂದು ಅಪ್ಪಣೆ ಮಾಡಿದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿದ ಸರ್ಕಾರವು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ:3.3.2006ರ ಆದೇಶ ರಾಜ್ಯ ಉಚ್ಚ ನ್ಯಾಯಾಲಯದ ದಿನಾಂಕ:3.7.2006 ಮತ್ತು 31.10.2006ರ ಆದೇಶಗಳನ್ನು ಅನುಷ್ಠಾನಗೊಳಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 91 ಕಸನಿ 2006 ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2007**

ಶ್ರೀ ಎಚ್. ಶಂಕರಪ್ಪ, ಉಪನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಸಲ್ಲಿಸಿದ ಅರ್ಜಿ ಸಂಖ್ಯೆ 627/1998ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ:3.3.2006ರಲ್ಲಿ ನೀಡಿದ ಆದೇಶದ ಬೆಳಕಿನಲ್ಲಿ ಇಲಾಖೆಯ ಸಹಾಯಕ ನಿರ್ದೇಶಕರ ಜೇಷ್ಠತಾ ಪಟ್ಟಿ ಹಾಗೂ ಉಪನಿರ್ದೇಶಕರ ಜೇಷ್ಠತಾ ಪಟ್ಟಿಗಳನ್ನು ಪರಿಷ್ಕರಿಸಿ ಪರಿಸ್ಕೃತ ಜೇಷ್ಠತಾ ಪಟ್ಟಿಯನ್ನು ಕೂಡಲೇ ಸರ್ಕಾರಕ್ಕೆ ಸಲ್ಲಿಸಬೇಕೆಂದು ಸರ್ಕಾರವು ಆಯುಕ್ತರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಆದೇಶಿಸುತ್ತದೆ.

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಸುವರ್ಣ ಕರ್ನಾಟಕ ವಿಶೇಷ ಘಟಕದಲ್ಲಿ ಸೃಜಿಸಲಾದ ಜಂಟಿ ನಿರ್ದೇಶಕರ ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳೀಯ ನಿಯಮ 32 ರನ್ವಯ ಎಚ್. ಶಂಕರಪ್ಪ ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸ್ವತಂತ್ರ ಪ್ರಭಾರದಲ್ಲಿಡುತ್ತದೆ. ಈ ವ್ಯವಸ್ಥೆಯು ರಿಟ್ ಅರ್ಜಿ ಸಂಖ್ಯೆ: 5643/2006ರಲ್ಲಿ ರಾಜ್ಯ ಉಚ್ಚ ನ್ಯಾಯಾಲಯವು ನೀಡುವ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

ಎಚ್. ಶಂಕರಪ್ಪ, ಉಪನಿರ್ದೇಶಕರಿಗೆ ಜಂಟಿ ನಿರ್ದೇಶಕರ ಹುದ್ದೆಗೆ ಪದೋನ್ನತಿ ನೀಡುವುದನ್ನು ನಂತರ ಪರಿಗಣಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ
ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 275

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಅಧಿಕಾರ ಹಂಚಿಕೆ ಹಾಗೂ ರೂಪುರೇಷೆಗಳನ್ನು ನಿರ್ಧರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಕೃತೋಇ 233 ತೋಇವಿ 2006 ದಿನಾಂಕ:20.11.2006.
2 ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಸಭೆಯ ನಡವಳಿ ದಿನಾಂಕ:25.1.2007.
3 ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋನಿ/ಆಸ/274/2007 ದಿನಾಂಕ:8.2.2007.

**ಪ್ರಸ್ತಾವನೆ :**

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ರಾಜ್ಯದಲ್ಲಿರುವ ಎಲ್ಲಾ ಸರ್ಕಾರಿ ಉದ್ಯಾನವನಗಳನ್ನು ಮತ್ತು ತೋಟಗಳನ್ನು ಸೇರಿಸಿ ನಿರ್ವಹಿಸಲು, ಮೇಲೆ ಓದಲಾದ (1)ರ ಆದೇಶದಲ್ಲಿ ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನವೆಂದು ನಾಮಕರಣ ಮಾಡಿ, ಈ ಪ್ರತಿಷ್ಠಾನಕ್ಕೆ ಮಾನ್ಯ ತೋಟಗಾರಿಕೆ ಸಚಿವರು, ಕರ್ನಾಟಕ ಸರ್ಕಾರ ಇವರನ್ನು ಗೌರವಾಧ್ಯಕ್ಷರನ್ನಾಗಿ, ಮಾನ್ಯ ಪ್ರಧಾನ ಕಾರ್ಯದರ್ಶಿಗಳು (ತೋಟಗಾರಿಕೆ), ಕೃಷಿ ಮತ್ತು ತೋಟಗಾರಿಕೆ ಇಲಾಖೆ ಇವರನ್ನು ಕಾರ್ಯನಿರ್ವಾಹಕ ಸಹ ಅಧ್ಯಕ್ಷರನ್ನಾಗಿ ನೇಮಿಸಿದ್ದು, ಅದರಂತೆ ದಿನಾಂಕ:25.1.2007 ರಂದು ಅಪರಾಹ್ನ 5.00 ಘಂಟೆಗೆ ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಸಭೆಯನ್ನು ನಡೆಸಿ, ಓದಲಾದ (3)ರ ಪತ್ರದೊಂದಿಗೆ ಸರ್ಕಾರಕ್ಕೆ ಸಲ್ಲಿಸಿ ಅನುಮೋದನೆ ಹಾಗೂ ಮುಂದಿನ ಕ್ರಮಕ್ಕಾಗಿ ತೋಟಗಾರಿಕೆ ನಿರ್ದೇಶಕರು ಸಲ್ಲಿಸಿರುತ್ತಾರೆ.

ನಡವಳಿಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 106 ತೋಇವಿ 2007, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2007**

ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದಡಿ ಅಧಿಕಾರಯುತ ಸಮಿತಿಯ ಅಧಿಕಾರ ಹಂಚಿಕೆ ಹಾಗು ರೂಪುರೇಷೆಗಳನ್ನು ಹಾಗೂ 4 (ನಾಲ್ಕು) ಪ್ರಾದೇಶಿಕ ಅಧಿಕಾರಯುತ ಸಮಿತಿಯ ರಚನೆ ಹಾಗೂ ಅವುಗಳ ಅಧ್ಯಕ್ಷರು ಮತ್ತು ಸದಸ್ಯ ಕಾರ್ಯದರ್ಶಿಗಳನ್ನು ಹಾಗೂ ಇವರ ಕಾರ್ಯ ಹಂಚಿಕೆಗಳು ಹಾಗೂ ಕರ್ತವ್ಯಗಳು ಈ ಕೆಳಕಂಡತಿರುವಂತೆ ಆದೇಶಿಸಿದೆ.

**I ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಕರ್ನಾಟಕ ರಾಜ್ಯದ ಅಧಿಕಾರಯುತ ಸಮಿತಿ :**

| | |
|---|---|
| 1) ಮಾನ್ಯ ತೋಟಗಾರಿಕೆ ಸಚಿವರು | ಗೌರವ ಅಧ್ಯಕ್ಷರು (ಈ ಪ್ರತಿಷ್ಠಾನದ ಮುಖ್ಯಸ್ಥರು |
| 2) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು (ತೋಟಗಾರಿಕೆ), ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಕಾರ್ಯ ನಿರ್ವಾಹಕ ಸಹ ಅಧ್ಯಕ್ಷರು (ಈ ಪ್ರತಿಷ್ಠಾನದ ಕಾರ್ಯ ನಿರ್ವಾಹಕ ಮುಖ್ಯಸ್ಥರಾಗಿರುತ್ತಾರೆ) |
| 3) ಅಧ್ಯಕ್ಷರು, ಪ್ರಾದೇಶಿಕ ಅಧಿಕಾರಯುತ ಸಮಿತಿ, ಬೆಂಗಳೂರು, | ಸದಸ್ಯರು |
| 4) ಅಧ್ಯಕ್ಷರು, ಪ್ರಾದೇಶಿಕ ಅಧಿಕಾರಯುತ ಸಮಿತಿ, ಮೈಸೂರು | ಸದಸ್ಯರು |
| 5) ಅಧ್ಯಕ್ಷರು, ಪ್ರಾದೇಶಿಕ ಅಧಿಕಾರಯುತ ಸಮಿತಿ, ಬೆಳಗಾಂ | ಸದಸ್ಯರು |
| 6) ಅಧ್ಯಕ್ಷರು, ಪ್ರಾದೇಶಿಕ ಅಧಿಕಾರಯುತ ಸಮಿತಿ, ಗುಲ್ಬರ್ಗಾ | ಸದಸ್ಯರು |
| 7) ನಾಲ್ಕು ಪ್ರಾದೇಶಿಕ ಸಮಿತಿಗಳ ಸದಸ್ಯ ಕಾರ್ಯದರ್ಶಿಗಳು (ಬೆಂಗಳೂರು, ಮೈಸೂರು, ಬೆಳಗಾಂ, ಗುಲ್ಬರ್ಗಾ) | ಸದಸ್ಯರು |
| 8) ಪ್ರತಿಷ್ಠಾನದ ಹಾಲಿ ಇರುವ ಸದಸ್ಯರುಗಳು | ಸದಸ್ಯರು |
| 9) ತೋಟಗಾರಿಕೆ ನಿರ್ದೇಶಕರು | ಸದಸ್ಯ ಕಾರ್ಯದರ್ಶಿ |
| 10) ತೋಟಗಾರಿಕೆ ಜಂಟಿ ನಿರ್ದೇಶಕರು (ಉದ್ಯಾನವನಗಳು, ತೋಟಗಳು ಮತ್ತು ಪುಷ್ಪಾಭಿವೃದ್ಧಿ) | ಜಂಟಿ ಸದಸ್ಯ ಕಾರ್ಯದರ್ಶಿ. |

**II** ಮೇಲ್ಕಂಡ ಸಮಿತಿಯ ಅಧಿಕಾರಯುತ ಸಮಿತಿಯ ಅಧಿಕಾರ ಹಂಚಿಕೆ ಕೆಳಕಂಡಂತಿದೆ:

**ಗೌರವಾಧ್ಯಕ್ಷರು :** ಪ್ರತಿಷ್ಠಾನದ ವ್ಯಾಪ್ತಿಯ ಕೆಲಸ ಕಾರ್ಯಗಳ ಉಸ್ತುವಾರಿ /ಪರಿಶೀಲಿಸುವ ಅಧಿಕಾರವನ್ನು ಹೊಂದಿರುತ್ತಾರೆ. ಹಾಗೆಯೇ ವರ್ಷದಲ್ಲಿ 2 ಬಾರಿ ಗೌರವ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ಪ್ರತಿಷ್ಠಾನದ ಸಭೆಯನ್ನು ಕರೆಯುವ ಅಧಿಕಾರವಿರುತ್ತದೆ.

**ಕಾರ್ಯನಿರ್ವಾಹಕ ಸಹ ಅಧ್ಯಕ್ಷರು :** ಇವರು ಪ್ರತಿಷ್ಠಾನದ ಕಾರ್ಯನಿರ್ವಾಹಕ ಮುಖ್ಯಸ್ಥರಾಗಿರುತ್ತಾರೆ.

1) ಪ್ರತಿ ಎರಡು ತಿಂಗಳಿಗೊಮ್ಮೆ ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಸಭೆ ಕರೆಯುವ ಅಧಿಕಾರ ಹೊಂದಿರುತ್ತಾರೆ.

2) ಅಗತ್ಯವಿದ್ದಲ್ಲಿ ಯಾವ ಸಮಯದಲ್ಲಾದರೂ ಸಭೆ ಕರೆಯುವ ಅಧಿಕಾರ ಹೊಂದಿರುತ್ತಾರೆ.

3) ಉದ್ಯಾನವನಗಳ ಪರಿಣಾಮಕಾರಿ ಅಭಿವೃದ್ಧಿಗೆ ಪೂರಕವಾದ ಯೋಜನೆಗಳನ್ನು ರೂಪಿಸಲು, ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು, ವಾರ್ಷಿಕ ಯೋಜನೆಯ ಪರಾಮರ್ಶೆ ಮತ್ತು ಅಂಗೀಕಾರ ಮಾಡಲು ಹಾಗು ಪ್ರಗತಿ ಸಾಧನೆ ಬಗ್ಗೆ ಪರಿಶೀಲಿಸಲು ಹಾಗು ಎಲ್ಲಾ ಕಾರ್ಯನಿರ್ವಾಹಕ ಅಧಿಕಾರವನ್ನು ಕಾರ್ಯನಿರ್ವಾಹಕ ಸಹ ಅಧ್ಯಕ್ಷರು ಹೊಂದಿರುತ್ತಾರೆ. ಇವರು ಈ ಪ್ರತಿಷ್ಠಾನದ ಕಾರ್ಯನಿರ್ವಾಹಣಾಧಿಕಾರಿ ಹಾಗೂ ಮುಖ್ಯಸ್ಥರಾಗಿರುತ್ತಾರೆ (CEO)

**ಪ್ರತಿಷ್ಠಾನದ ಸದಸ್ಯ ಕಾರ್ಯದರ್ಶಿ :** ಸರ್ಕಾರದ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ವಾಣಿಜ್ಯ ತೆರಿಗೆ ಆಯುಕ್ತರು/ ಅಬಕಾರಿ ಆಯುಕ್ತರು ರವರುಗಳಿಗೆ ಸರ್ಕಾರ ನೀಡಿರುವ ಸಮನಾಂತರ ಅಧಿಕಾರವನ್ನು ಪ್ರತಿಷ್ಠಾನದಡಿಯಲ್ಲಿ ನೀಡಲಾಗಿದೆ.

ಪ್ರತಿಷ್ಠಾನದ ಜಂಟಿ ಸದಸ್ಯ ಕಾರ್ಯದರ್ಶಿ : ಪ್ರತಿಷ್ಠಾನದ ಕಾರ್ಯಗಳನ್ನು ನಿರ್ವಹಿಸಲು, ತೋಟಗಾರಿಕೆ ನಿರ್ದೇಶಕರವರಿಗಿರುವ ಎಲ್ಲಾ ಆಡಳಿತಾತ್ಮಕ ಹಾಗು ಉಸ್ತುವಾರಿ ನಿರ್ವಹಣಾ ಕಾರ್ಯಗಳ ಅಧಿಕಾರವನ್ನು ಪ್ರತಿಷ್ಠಾನದ ವ್ಯಾಪ್ತಿಯಲ್ಲಿ ಜಂಟಿ ಸದಸ್ಯ ಕಾರ್ಯದರ್ಶಿಗಳಿಗೆ ನೀಡಲಾಗಿದೆ.

**III ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಕರ್ತವ್ಯಗಳು :**

ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಸರ್ಕಾರವು ಅಂಗ ಪ್ರತಿಷ್ಠಾನವಾಗಿರುತ್ತದೆ ಹಾಗೂ ಸರ್ಕಾರದ ಎಲ್ಲಾ ನೀತಿ ನಿಯಮಗಳನ್ನು ನಿಯಮಾನುಸಾರ ಪಾಲಿಸಿ, ಸರ್ಕಾರದ ಸಂಸ್ಥೆಯಾಗಿ ಕಾರ್ಯನಿರ್ವಹಿಸತಕ್ಕದ್ದು. ಈ ಅಂಶದ ಜೊತೆಗೆ ಕೆಳಕಂಡ ಮಹತ್ವ ಪೂರ್ಣ ಉದ್ದೇಶಗಳನ್ನು ಪ್ರತಿಷ್ಠಾನವು ಹೊಂದಿರತಕ್ಕದ್ದು.

1. ಪ್ರತಿಷ್ಠಾನದ ವ್ಯಾಪ್ತಿಯಲ್ಲಿರುವ ಹಾಲಿ ಉದ್ಯಾನವನಗಳನ್ನು ನಿರ್ವಹಿಸುವುದು ಹಾಗು ಹೊಸದಾಗಿ ಉದ್ಯಾನವನಗಳನ್ನು ಅಭಿವದ್ಧಿಪಡಿಸುವುದು.

2. ಸಂಪನ್ಮೂಲ ಕ್ರೋಢೀಕರಣ ಮತ್ತು ವೃತ್ತಿಪರ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಾರ್ವಜನಿಕ–ಖಾಸಗಿ ಸಹಭಾಗಿತ್ವವನ್ನು ಹೊಂದಲು ಅವಕಾಶ ಮಾಡಿಕೊಡುವುದು.

3. ಬಾಹ್ಯ ಮೂಲದಿಂದ ಚಟುವಟಿಕೆಗಳನ್ನು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವುದು.

4. ಡೊನೇಷನ್‌ಗಳು, ದತ್ತಿ, ಪ್ರಾಯೋಜಕತೆ, ಕೊಡುಗೆಗಳು, ಗೇಟ್ ಫೀ, ಇತ್ಯಾದಿ ಪಡೆಯುವ ಮೂಲಕ ಸ್ವಂತ ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಅವಕಾಶ ಮಾಡಿಕೊಡುವುದು.

5. ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಸ್ಥಳೀಯ ಸಂಸ್ಥೆಗಳು, ಮತ್ತಿತರ ಏಜೆನ್ಸಿಗಳಿಂದ ಹಣಕಾಸು ನೆರವು ಪಡೆಯಲು ಅಗತ್ಯವಿರುವ ಯೋಜನೆಗಳು ಮತ್ತು ಪ್ರಾಜೆಕ್ಟ್‌ಗಳನ್ನು ರೂಪಿಸಲು ಅವಕಾಶ ಮಾಡಿಕೊಡುವುದು.

6. ಪಾರ್ಕ್‌ಗಳು ಮತ್ತು ಉದ್ಯಾನವನಗಳನ್ನು ಸೂಕ್ತ ರೀತಿಯಲ್ಲಿ ಅಭಿವೃದ್ಧಿಪಡಿಸಲು ಮತ್ತು ನಿರ್ವಹಿಸಲು ನೆರವಾಗುವ ಎಲ್ಲಾ ಚಟುವಟಿಕೆಗಳನ್ನು ಕೈಗೊಳ್ಳಲು ಅವಕಾಶ ಮಾಡಿಕೊಡುವುದು. ಉದಾಹರಣೆಗೆ ಪ್ರವಾಸಿ ಆಕರ್ಷಣೆ ಕೇಂದ್ರಗಳನ್ನಾಗಿ ಮಾಡುವುದು.

7. ಪಾರ್ಕ್‌ಗಳು ಮತ್ತು ಉದ್ಯಾನವನಗಳ ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿ ಬಳಸಲು ಮೂಲ ಧನಕ್ಕೆ ಸಂಪನ್ಮೂಲಗಳನ್ನು ಜಮೆ ಮಾಡುವುದು ಮತ್ತು ಈ ನಿಧಿಯನ್ನು ಬಳಸಲು ಅವಕಾಶ ಕಲ್ಪಿಸುವುದು.

8. ಪ್ರತಿ ಎರಡು ತಿಂಗಳಿಗೊಮ್ಮೆ ಅಥವಾ ಅಗತ್ಯಕ್ಕೆ ತಕ್ಕಂತೆ ಸಭೆ ಸೇರಿ ಪ್ರತಿಷ್ಠಾನದ ವ್ಯಾಪ್ತಿಗೊಳಪಡುವ ಉದ್ಯಾನವನಗಳ ಅಭಿವೃದ್ಧಿ ಪ್ರಗತಿಯನ್ನು ಪರಾಮರ್ಷಿಸಿ, ಉದ್ಯಾನವನಗಳ ಅಭಿವೃದ್ಧಿ ಮತ್ತು ಉತ್ತಮ ನಿರ್ವಹಣೆಗೆ ಪೂರಕವಾದ ಸಲಹೆ ಸೂಚನೆಗಳನ್ನು ನೀಡುವುದು.

9. ಉದ್ಯಾನವನಗಳ ಅಭಿವೃದ್ಧಿ / ನಿರ್ವಹಣೆಗೆ ಪೂರಕವಾದಂತಹ ಪ್ರಸ್ತಾವನೆಗಳನ್ನು ಸಮಗ್ರವಾಗಿ ಪರಿಶೀಲಿಸಿ ಅಂಗೀಕರಿಸುವುದು.

**IV ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಅಧಿಕಾರಾವಧಿ :**

ಗೌರವ ಅಧ್ಯಕ್ಷರು, ಕಾರ್ಯನಿರ್ವಾಹಕ ಸಹ ಅಧ್ಯಕ್ಷರು, ಸದಸ್ಯ ಕಾರ್ಯದರ್ಶಿಗಳು ಹಾಗೂ ಜಂಟಿ ಸದಸ್ಯ ಕಾರ್ಯದರ್ಶಿಗಳನ್ನು ಹೊರತುಪಡಿಸಿ, ಪ್ರತಿಷ್ಠಾನದ ಉಳಿದ ಸದಸ್ಯರುಗಳ ಅಧಿಕಾರವಧಿಯು 3 (ಮೂರು) ವರ್ಷಗಳಾಗಿರುತ್ತದೆ.

ಬೆಂಗಳೂರು ಗಾರ್ಡನ್ ಟ್ರಸ್ಟ್ ವತಿಯಿಂದ ಅಧ್ಯಕ್ಷರು, ಬೆಂಗಳೂರು ಗಾರ್ಡನ್ ಟ್ರಸ್ಟ್ ರವರಿಗೆ ನೀಡಿರುವ ಮೊಬೈಲ್ ದೂರವಾಣಿಯನ್ನು (ಸಂಖ್ಯೆ: 9980607277) ಪ್ರಸ್ತುತ ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಕಾರ್ಯನಿರ್ವಾಹಕ ಸಹ ಅಧ್ಯಕ್ಷರಿಗೆ ನೀಡುವುದು ಹಾಗೂ ಈ ಮೊಬೈಲ್ ಕರೆಗಳ ವೆಚ್ಚವನ್ನು ಪ್ರತಿಷ್ಠಾನದ ವತಿಯಿಂದ ಕಾಲ–ಕಾಲಕ್ಕೆ ಭರಿಸತಕ್ಕದ್ದು.

**V ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ನಿಧಿಯನ್ನು ನಿರ್ವಹಿಸುವ ಬಗ್ಗೆ.**

ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಸದಸ್ಯ ಕಾರ್ಯದರ್ಶಿಗಳು ಹಾಗೂ ಜಂಟಿ ಸದಸ್ಯ ಕಾರ್ಯದರ್ಶಿಗಳು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಜಂಟಿ ಖಾತೆಯನ್ನು ತೆರೆದು ಪ್ರತಿಷ್ಠಾನದ ನಿಧಿಯನ್ನು ನಿಯಮಾನುಸಾರ ನಿರ್ವಹಿಸತಕ್ಕದ್ದು.

**VI ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಲೆಕ್ಕ ಪತ್ರ ನಿರ್ವಹಣೆ ಮತ್ತು ಲೆಕ್ಕ ತಪಾಸಣೆ ಬಗ್ಗೆ:**

ಪ್ರಾದೇಶಿಕ ಅಧಿಕಾರಯುತ ಸಮಿತಿಗಳೂ ಸೇರಿದಂತೆ ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದಡಿ ನಿರ್ವಹಿಸುತ್ತಿರುವ ಎಲ್ಲಾ ಆಯವ್ಯಯ, ಬರುವ ಆದಾಯ ಮತ್ತು ವೆಚ್ಚಗಳ ಬಗ್ಗೆ ಲೆಕ್ಕ ಪತ್ರಗಳನ್ನು ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನವು ಕ್ರೋಢೀಕರಿಸಿ ಕಾಲಕಾಲಕ್ಕೆ ಲೆಕ್ಕ ಪತ್ರಗಳ ನಿರ್ವಹಣೆ ಮಾಡತಕ್ಕದ್ದು ಹಾಗೂ ಅವುಗಳ ಲೆಕ್ಕ ತಪಾಸಣೆಗೆ ನಿಯಮಾನುಸಾರ ಅಗತ್ಯ ಕ್ರಮ ಕೈಗೊಳ್ಳುವುದು, ಪ್ರಾದೇಶಿಕ ಅಧಿಕಾರಯುತ ಸಮಿತಿಗಳು ಅವರ ವ್ಯಾಪ್ತಿಗೆ ಬರುವ ಆದಾಯ ಹಾಗೂ ಖರ್ಚುಗಳ ಬಗ್ಗೆ ಸಮರ್ಪಕ ಲೆಕ್ಕಪತ್ರಗಳನ್ನು ನಿರ್ವಹಣೆ ಮಾಡತಕ್ಕದ್ದು ಹಾಗೂ ಸರ್ಕಾರದ ಎಲ್ಲಾ ನೀತಿ ನಿಯಮಗಳನ್ನೂ ನಿಯಮಾನುಸಾರ ಪಾಲಿಸತಕ್ಕದ್ದು.

**VII ಪ್ರಾದೇಶಿಕ ಮಟ್ಟದಲ್ಲಿ ಅಧಿಕಾರಯುತ ಸಮಿತಿ (ಎಂಪಾವರ್ಡ್ ಕಮಿಟಿ)ಗಳನ್ನು ರಚನೆ:**

ಮೊದಲನೆಯದಾಗಿ ರಾಜ್ಯ ವ್ಯಾಪ್ತಿಯಲ್ಲಿ 4(ನಾಲ್ಕು) ಪ್ರಾದೇಶಿಕ ಮಟ್ಟದ ಅಧಿಕಾರಯುತ ಸಮಿತಿ (ಎಂಪಾವರ್ಡ್ ಕಮಿಟಿ) ಗಳನ್ನು ರಚಿಸಲಾಗಿದೆ. ಬೆಂಗಳೂರು, ಮೈಸೂರು, ಬೆಳಗಾಂ ಹಾಗೂ ಗುಲ್ಬರ್ಗಾ ವ್ಯಾಪ್ತಿಯ 4 (ನಾಲ್ಕು) ಅಧಿಕಾರಯುತ ಸಮಿತಿಗಳು (ಎಂಪಾವರ್ಡ್ ಕಮಿಟಗಳನ್ನು) ರಚಿಸಿ, ಆಯಾ ವಿಭಾಗದ ಪ್ರಾದೇಶಿಕ ಆಯುಕ್ತರುಗಳನ್ನು ಈ ಸಮಿತಿಯ ಅಧ್ಯಕ್ಷರುಗಳನ್ನಾಗಿ ನೇಮಿಸಲಾಗಿದೆ.

**VII ಪ್ರಾದೇಶಿಕ ಎಂಪಾವರ್ಡ್ ಕಮಿಟಿಯ ಅಂಗ ರಚನೆ:**

| | |
|---|---|
| 1. **ಅಧ್ಯಕ್ಷರು** | ಪ್ರಾದೇಶಿಕ ಆಯುಕ್ತರು |
| 2. **ಸದಸ್ಯ ಕಾರ್ಯದರ್ಶಿ** | ಪ್ರಾದೇಶಿಕ ಕೇಂದ್ರಸ್ಥಾನ ಜಿಲ್ಲೆಯ ಉಸ್ತುವಾರಿ ತೋಟಗಾರಿಕೆ ಅಪರ/ಜಂಟಿ ನಿರ್ದೇಶಕರು ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ ಮತ್ತು ಬೆಂಗಳೂರು ಪ್ರಾದೇಶಿಕ ಅಧಿಕಾರಯುತ ಸಮಿತಿಗೆ ತೋಟಗಾರಿಕೆ ಜಂಟಿ ನಿರ್ದೇಶಕರು (ಉದ್ಯಾನವನಗಳು, ತೋಟಗಳು ಮತ್ತು ಪುಷ್ಪಾಭಿವೃದ್ಧಿ) ರವರು ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ. |
| 3. **ಸದಸ್ಯರುಗಳು:** | |
| 1. ವಲಯ ಇನ್ಸ್ ಪೆಕ್ಟರ್ ಜನರಲ್ ಆಫ್ ಪೋಲಿಸ್ | ಸದಸ್ಯರು |
| 2 ಕೇಂದ್ರಸ್ಥಾನ ಜಿಲ್ಲೆಯ ತೋಟಗಾರಿಕೆ ಉಪ ನಿರ್ದೇಶಕರು, | ಸದಸ್ಯರು |
| 3. ಅಧೀಕ್ಷಕ ಅಭಿಯಂತರರು (ಕಟ್ಟಡಗಳ ವಿಭಾಗ) ಕರ್ನಾಟಕ ಲೋಕೋಪಯೋಗಿ ಇಲಾಖೆ | ಸದಸ್ಯರು |
| 4. ಸಂಬಂಧಿಸಿದ ನೀರಾವರಿ ನಿಗಮದ ಪ್ರತಿನಿಧಿ | ಸದಸ್ಯರು |
| 5. ಸಂಬಂಧಪಟ್ಟ ವಲಯದ ವ್ಯವಸ್ಥಾಪಕ ನಿರ್ದೇಶಕರು, ಕೆ.ಪಿ.ಟಿ.ಸಿ.ಎಲ್, | ಸದಸ್ಯರು |

6. ಪ್ರವಾಸೋದ್ಯಮ ಇಲಾಖೆಯ ಪ್ರತಿನಿಧಿ — ಸದಸ್ಯರು
7. ಒಬ್ಬರು ಪ್ರಗತಿಪರ ರೈತರು /ಒಬ್ಬರು ಪರಿಸರವಾದಿಗಳು — ಇಬ್ಬರು ಸದಸ್ಯರು
8 ತೋಟಗಾರಿಕೆಯಲ್ಲಿ ಪರಿಣಿತಿ ಹೊಂದಿದ ಒಬ್ಬರು ಮಹಿಳಾ ಪ್ರತಿನಿಧಿ — ಸದಸ್ಯರು
9 ಪ್ರಮುಖ ವಾಣಿಜ್ಯೋಧ್ಯಮಿ — ಸದಸ್ಯರು

**VII ಪ್ರಾದೇಶಿಕ ಎಂಪಾವರ್ಡ್ ಕಮಿಟಿಯ ಕರ್ತವ್ಯಗಳು:**

1. ಪ್ರತಿಷ್ಠಾನದಲ್ಲರುವ ಎಲ್ಲಾ ಅಧಿಕಾರವನ್ನು ಎಂಪಾವರ್ಡ್ ಕಮಿಟಿಗಳು ಚಲಾಯಿಸಬಹುದಾಗಿರುತ್ತದೆ.
2. ಅಧಿಕಾರಯುತ ಸಮಿತಿಯ (ಎಂಪಾವರ್ಡ್ ಕಮಿಟಿ) ಸದಸ್ಯ ಕಾರ್ಯದರ್ಶಿಗಳು ಸಮಿತಿಯ ದಿನ ನಿತ್ಯದ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಪೂರ್ಣ ಅಧಿಕಾರವನ್ನು ಹೊಂದಿರುತ್ತಾರೆ.
3. ಟ್ರಸ್ಟ್ ವ್ಯಾಪ್ತಿಯಲ್ಲಿರುವ ಹಾಲಿ ಉದ್ಯಾನವನಗಳನ್ನು ನಿರ್ವಹಿಸುವುದು ಹಾಗೂ ಹೊಸದಾಗಿ ಉದ್ಯಾನವನಗಳನ್ನು ಅಭಿವೃದ್ಧಿಪಡಿಸುವುದು.
4. ಸಂಪನ್ಮೂಲ ಕ್ರೋಢೀಕರಣ ಮತ್ತು ವೃತ್ತಿಪರ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಸಾರ್ವಜನಿಕ ಖಾಸಗಿ ಸಹಭಾಗಿತ್ವವನ್ನು ಹೊಂದಲು ಅವಕಾಶ ಮಾಡಿಕೊಡುವುದು.
5. ಬಾಹ್ಯ ಮೂಲದಿಂದ ಚಟುವಟಿಕೆಗಳನ್ನು ಗುತ್ತಿಗೆ ಆಧಾರದ ಮೇಲೆ ಕೈಗೊಳ್ಳುವುದು.
6. ಡೊನೇಷನ್‌ಗಳು, ದತ್ತಿ, ಪ್ರಾಯೋಜಕತೆ, ಕೊಡುಗೆಗಳು, ಗೇಟ್ ಫೀ, ಇತ್ಯಾದಿ ಪಡೆಯುವ ಮೂಲಕ ಸ್ವಂತ ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಅವಕಾಶ ಮಾಡಿಕೊಡುವುದು.
7. ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಸ್ಥಳೀಯ ಸಂಸ್ಥೆಗಳು, ಮತ್ತಿತರ ಏಜೆನ್ಸಿಗಳಿಂದ ಹಣಕಾಸು ನೆರವು ಪಡೆಯಲು ಅಗತ್ಯವಿರುವ ಯೋಜನೆಗಳು ಮತ್ತು ಪ್ರಾಜೆಕ್ಟ್‌ಗಳನ್ನು ರೂಪಿಸಲು ಅವಕಾಶ ಮಾಡಿಕೊಡುವುದು.
8. ಪಾರ್ಕ್‌ಗಳು ಮತ್ತು ಉದ್ಯಾನವನಗಳನ್ನು ಸೂಕ್ತ ರೀತಿಯಲ್ಲಿ ಅಭಿವೃದ್ಧಿಪಡಿಸಲು ಮತ್ತು ನಿರ್ವಹಿಸಲು ನೆರವಾಗುವ ಎಲ್ಲಾ ಚಟುವಟಿಕೆಗಳನ್ನು ಕೈಗೊಳ್ಳಲು ಅವಕಾಶ ಮಾಡಿಕೊಡುವುದು ಉದಾಹರಣೆಗೆ ಪ್ರವಾಸಿ ಆಕರ್ಷಣೆ ಕೇಂದ್ರಗಳನ್ನಾಗಿ ಮಾಡುವುದು.
9. ಪಾರ್ಕ್‌ಗಳು ಮತ್ತು ಉದ್ಯಾನವನಗಳ ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿ ಬಳಸಲು ಮೂಲ ಧನಕ್ಕೆ ಸಂಪನ್ಮೂಲಗಳನ್ನು ಜಮೆ ಮಾಡುವುದು ಮತ್ತು ಈ ನಿಧಿಯನ್ನು ಬಳಸಲು ಅವಕಾಶ ಕಲ್ಪಿಸುವುದು.
10. ಪ್ರತಿ ತಿಂಗಳು ಕೈಗೊಳ್ಳುವ ಕಾರ್ಯಗಳ ವಿವರ ಹಾಗೂ ಪ್ರಗತಿ ವರದಿಯನ್ನು ಪ್ರತಿಷ್ಠಾನಕ್ಕೆ ಸಲ್ಲಿಸುವುದು.
11. ಪ್ರತಿ ಎರಡು ತಿಂಗಳಿಗೊಮ್ಮ ಅಥವ ಅಗತ್ಯಕ್ಕೆ ತಕ್ಕಂತೆ ಪ್ರತಿಷ್ಠಾನದ ಕಾರ್ಯನಿರ್ವಾಹಕ ಸಹ ಅಧ್ಯಕ್ಷರು ಕರೆಯುವ ಸಭೆಗೆ ಪ್ರಾದೇಶಿಕ ಎಂಪಾವರ್ಡ್ ಕಮಿಟಿಯ ಅಧ್ಯಕ್ಷರು ಹಾಗೂ ಸದಸ್ಯ ಕಾರ್ಯದಶಿಗಳು ಪೂರ್ಣ ವಿವರಗಳೊಡನೆ ಸಭೆಗೆ ಹಾಜರಾಗುವುದು.
12. ಆಯಾ ಪ್ರಾದೇಶಿಕ ವಿಭಾಗದ ವ್ಯಾಪ್ತಿಯ ಉದ್ಯಾನವನಗಳ ಅಭಿವೃದ್ಧಿ/ ನಿರ್ವಹಣೆಗೆ ಸಂಬಂಧಿಸಿದ ಪ್ರಸ್ತಾವನೆ ಗಳನ್ನು ಕಾಲಕಾಲಕ್ಕೆ ಇಲಾಖೆಯಲ್ಲಿ ಚಾಲ್ತಿಯಲ್ಲಿರುವ ಆಡಳಿತಾತ್ಮಕ ಹಾಗು ತಾಂತ್ರಿಕ ಅಧಿಕಾರವನ್ನು ಚಲಾಯಿಸಿ ಕೈಗೊಳ್ಳುವುದು.
13. ಆಯಾ ಪ್ರಾದೇಶಿಕ ವಿಭಾಗದ ವ್ಯಾಪ್ತಿಗೊಳಪಡುವ ಉದ್ಯಾನವನಗಳ ನಿರ್ವಹಣೆ, ಅಭಿವೃದ್ಧಿ ಹಾಗೂ ಸಂಬಂಧಿಸಿದ ನಕ್ಷೆಗಳನ್ನೊಳಗೊಂಡ ವಾರ್ಷಿಕ ಯೋಜನೆ ಸಿದ್ಧಪಡಿಸಿ, ಪರಾಮರ್ಷಿಸಿ ಅಂಗೀಕರಿಸುವುದು.
14. ಸರ್ಕಾರದ ಎಲ್ಲಾ ನೀತಿ ನಿಯಮಗಳನ್ನು ನಿಯಮಾನುಸಾರ ಪಾಲಿಸಿ ಸುವರ್ಣ ಕರ್ನಾಟಕಉದ್ಯಾನವನಗಳ ಪ್ರತಿಷ್ಠಾನದ ಅಂಗವಾಗಿ ಕೆಲಸ ನಿರ್ವಹಿಸಬೇಕು.

**VIII ಸಂಪನ್ಮೂಲ ಕ್ರೋಢೀಕರಣ ಮತ್ತು ವೆಚ್ಚ ಭರಿಸುವ ಬಗ್ಗೆ :**

ಪ್ರಾದೇಶಿಕ ಅಧಿಕಾರಯುತ ಸಮಿತಿಗಳು ತಮ್ಮ ವ್ಯಾಪ್ತಿಯಲ್ಲಿನ ಉದ್ಯಾನವನಗಳ ಅಭಿವೃದ್ಧಿಗಾಗಿ ಡೊನೇಷನ್‌ಗಳು, ದತ್ತಿ, ಪ್ರಾಯೋಜಕತೆ, ಕೊಡುಗೆಗಳು, ಗೇಟ್ ಫೀ ಇತ್ಯಾದಿ ರೂಪದಲ್ಲಿ ಸಂಗ್ರಹಿಸುವ ಸಂಪನ್ಮೂಲಗಳನ್ನು ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದ ಹೆಸರಿನಲ್ಲಿಯೇ ಸಂಗ್ರಹಿಸಿ, ಪ್ರತಿಷ್ಠಾನದ ಬ್ಯಾಂಕ್ ಖಾತೆಗೆ ಕಾಲಕಾಲಕ್ಕೆ ಜಮೆ ಮಾಡತಕ್ಕದ್ದು ಹಾಗೂ ತಮ್ಮ ವ್ಯಾಪ್ತಿಯ ಉದ್ಯಾನವನಗಳ ಅಭಿವೃದ್ಧಿ /ನಿರ್ವಹಣೆಗೆ ಸಂಬಂಧಿಸಿದಂತೆ ವಾರ್ಷಿಕ ಕಾರ್ಯಕ್ರಮ/ ಯೋಜನೆಗಳನ್ನು ಸಿದ್ದಪಡಿಸಿ, ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನದಿಂದ ಅನುಮೋದನೆ ಪಡೆದು ಅಗತ್ಯಕ್ಕೆ ತಕ್ಕಂತೆ ಪ್ರತಿಷ್ಠಾನದಿಂದ ಅಯವ್ಯಯ ಮರು ಹಂಚಿಕೆಯನ್ನು ಪಡೆದು ನಿಯಮಾನುಸಾರ ವೆಚ್ಚ ಭರಿಸುವುದು.

**IX ಪ್ರಾದೇಶಿಕ ಎಂಪಾವರ್ಡ್ ಕಮಿಟಿಯು ಸಭೆ ಸೇರುವ ಬಗ್ಗೆ.**

ಪ್ರಾದೇಶಿಕ ಎಂಪಾವರ್ಡ್ ಕಮಿಟಿಯು ಪ್ರತಿ ತಿಂಗಳಿಗೊಮ್ಮ ಸಭೆ ಕರೆಯುವುದು.

**X ಪ್ರತಿಷ್ಠಾನದ ನಿಧಿಯನ್ನು ಎಂಪಾವರ್ಡ್ ಕಮಿಟಿಯು ನಿರ್ವಹಿಸುವ ಬಗ್ಗೆ:**

ಆಯಾ ವಿಭಾಗೀಯ ಎಂಪಾವರ್ಡ್ ಕಮಿಟಿಯ ಅಧ್ಯಕ್ಷರು ಹಾಗೂ ಸದಸ್ಯ ಕಾರ್ಯದರ್ಶಿಗಳು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಜಂಟಿ ಖಾತೆಯನ್ನು ತೆರೆದು ಪ್ರತಿಷ್ಠಾನದಿಂದ ಬಂದ ನಿಧಿಯನ್ನು ನಿಯಮಾನುಸಾರ ನಿರ್ವಹಿಸುವುದು.

**XI ಪ್ರಾದೇಶಿಕ ಎಂಪಾವರ್ಡ್ ಕಮಿಟಿಯ ಅಧಿಕಾರಾವಧಿ:**

ಕಮಿಟಿಯು ಅಧ್ಯಕ್ಷರು, ಸದಸ್ಯ ಕಾರ್ಯದರ್ಶಿ ಹಾಗೂ ಕೇಂದ್ರಸ್ಥಾನ ಜಿಲ್ಲೆಯ ತೋಟಗಾರಿಕೆ ಉಪ ನಿರ್ದೇಶಕರನ್ನು ಹೊರತುಪಡಿಸಿ ಕಮಿಟಿಯ ಉಳಿದ ಸದಸ್ಯರ ಅಧಿಕಾರವಧಿಯು 3 (ಮೂರು) ವರ್ಷಗಳಾಗಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 308

ಸರ್ಕಾರದ ಅಧೀನ ಕಾರ್ಯದರ್ಶಿ
ಕೃಷಿ ಮತ್ತು ತೋಟಗಾರಿಕೆ ಇಲಾಖೆ